ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

'ವಾರೀಸು ನಿಯಮಗಳು' ಇಸ್ಲಾಮೀ ಶರೀಅತ್‌ನಲ್ಲಿ ಅತಿ ಪ್ರಧಾನವಾಗಿರುವ ವಿಷಯಗಳಲ್ಲಿ ಸೇರಿವೆ. ಅದು ಎಲ್ಲ ಮುಸ್ಲಿಮರ ಜೀವನಕ್ಕೆ ಸಂಬಂಧಿಸಿದೆ. ಆದ್ದರಿಂದ ಪ್ರವಾದಿಯವರು(ಸ) ವಾರೀಸು ನಿಯಮವನ್ನು ಕಲಿಯುವಂತೆ ವಿಶೇಷ ಪ್ರೋತ್ಸಾಹ ನೀಡಿದ್ದಾರೆ. ಅವರು ಹೇಳಿರುವರು, "ನೀವು ಕುರ್‌ಆನ್ ಕಲಿಯಿರಿ, ಜನರಿಗೆ ಕಲಿಸಿರಿ, ನೀವು ವಾರೀಸು ನಿಯಮಗಳನ್ನು ತಿಳಿಯಿರಿ, ಜನರಿಗೆ ತಿಳಿಸಿರಿ."

ಇಂದು ಸಾಮಾನ್ಯ ಮುಸ್ಲಿಮರಿಗೆ ಮಾತ್ರವಲ್ಲ ಹೆಚ್ಚಿನ ವಿದ್ವಾಂಸರಿಗೆ ಕೂಡಾ ಈ ವಿಷಯಗಳ ವಿವಿಧ ಅಂಶಗಳ ಬಗ್ಗೆ ಸಾಕಷ್ಟು ತಿಳಿದಿಲ್ಲ. ಅದು ಅನೇಕ ತಪ್ಪುಗಳಿಗೆ ಕಾರಣವಾಗುತ್ತದೆ.

ಈ ಕೃತಿಯಲ್ಲಿ ವಾರೀಸು ಹಕ್ಕಿಗೆ ಸಂಬಂಧಿಸಿದ ಎಲ್ಲ ಅಂಶಗಳನ್ನೂ ಸಂಕ್ಷಿಪ್ತವಾಗಿ ವಿವರಿಸಲು ಪ್ರಯತ್ನಿಸಲಾಗಿದೆ. ವಿಷಯವು ಬಹಳ ಗಹನವಾಗಿರುವುದರಿಂದ ಆದಷ್ಟು ಸರಳಗೊಳಿಸಲು ಪ್ರಯತ್ನಿಸಿದ್ದರೂ ಅರಬಿ ಪದಗಳ ಬಳಕೆ ಅನಿವಾರ್ಯವಾಗಿರುವುದರಿಂದ ಅದು ಸಾಧ್ಯವಾಗಿಲ್ಲ. ಆದ್ದರಿಂದ ಬಹಳ ಗಮನವಿಟ್ಟು ಓದಿ ಅಭ್ಯಸಿಸಬೇಕಾಗಿದೆ.

ಇಸ್ಲಾಮೀ ಕಾನೂನುಗಳನ್ನು ಕಲಿಯುವುದಕ್ಕೆ ಮತ್ತು ಕಲಿಸುವುದಕ್ಕೆ ವಾಗ್ದಾನ ನೀಡಲಾದ ಉನ್ನತ ಪ್ರತಿಫಲವು ನಮಗೆಲ್ಲರಿಗೂ ದೊರೆಯಲಿ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

+ + +

ಮಹಿಳೆಯ ಹಕ್ಕಿನ ಬಗ್ಗೆ ತೀರಾ ಅಜ್ಞರಾಗಿದ್ದ ಅರಬ್ ಜನಾಂಗದಲ್ಲಿ ಪ್ರವಾದಿವರ್ಯರು ಆಕೆಗೆ ಪುರುಷನಿಗೆ ಸಮಾನವಾದ ಸ್ಥಾನಮಾನ ನೀಡಿದರು. ಆಸ್ತಿಯಲ್ಲಿ ಆಕೆಗೆ ಹಕ್ಕೇ ಇರಲಿಲ್ಲ. ಪ್ರವಾದಿವರ್ಯರು ಆಕೆಗೆ ವಾರೀಸು ಹಕ್ಕನ್ನೂ ನಿರ್ಣಯಿಸಿದರು. ಸ್ತ್ರೀಯ ಹಕ್ಕುಗಳ ವಿವರಣೆಗಾಗಿ ಪವಿತ್ರ ಕುರ್‌ಆನಿನಲ್ಲಿ ಅನೇಕ ಆಜ್ಞೆಗಳು ಅವತೀರ್ಣಗೊಂಡವು.

ಮಾತಾಪಿತರು ಮತ್ತಿತರ ಸಂಬಂಧಿಕರ ಆಸ್ತಿಯಲ್ಲಿ ಸ್ತ್ರೀಯರನ್ನು ವಾರೀಸುದಾರರೆಂದು ಪರಿಗಣಿಸಲಾಯಿತು. ಇಂದು ನಾಗರಿಕತೆಯ ಡಂಗುರ ಸಾರುತ್ತಿರುವ ಹಲವು ರಾಷ್ಟ್ರಗಳಲ್ಲಿ ಮಹಿಳೆಯರಿಗೆ ಆಸ್ತಿಯ ಹಕ್ಕಾಗಲಿ, ಮತದಾನದ ಹಕ್ಕಾಗಲಿ ಇಲ್ಲ. ಬ್ರಿಟನ್‌ನಲ್ಲಿ ಮಹಿಳೆಯರಿಗೆ ಮತದಾನದ ಹಕ್ಕು ಪ್ರಪ್ರಥಮವಾಗಿ ದೊರೆತುದು 1938ರಲ್ಲಿ. ಭಾರತೀಯ ಸಮಾಜದಲ್ಲಿ ಮಹಿಳೆಗೆ ಆಸ್ತಿಯ ಹಕ್ಕು ದೊರಕಿದ್ದೂ ತೀರಾ ಇತ್ತೀಚೆಗೆ. ಆದರೆ 14 ಶತಮಾನಗಳ ಹಿಂದೆಯೇ ಈ ಎಲ್ಲ ಹಕ್ಕುಗಳನ್ನೂ ಸ್ತ್ರೀಯರು ಅನುಭವಿಸುತ್ತಿದ್ದುದನ್ನು ನಾವು ಕಾಣುತ್ತೇವೆ. ಅವರಿಗೆ ಆ ಹಕ್ಕನ್ನು ಕೊಡಮಾಡಿದ ಪ್ರವಾದಿವರ್ಯರು ಎಷ್ಟು ದೊಡ್ಡ ಅನುಗ್ರಹ!

ಡಾ. ಶ್ರೀ ಅಡಿಯಾರ್

(ನನ್ನ ಪ್ರೀತಿಯ ಧರ್ಮ ಎಂಬ ಕೃತಿಯಲ್ಲಿ)

# ವಾರೀಸು ಹಕ್ಕು: ಕುರ್‌ಆನಿನಲ್ಲಿ

"ಮಾತಾಪಿತರೂ ಆಪ್ತ ಬಂಧುಗಳೂ ಬಿಟ್ಟು ಹೋದ ಸಂಪತ್ತಿನಲ್ಲಿ ಪುರುಷರಿಗೆ ಪಾಲಿದೆ. ಮಾತಾಪಿತರೂ ಆಪ್ತ ಬಂಧುಗಳೂ ಬಿಟ್ಟು ಹೋದ ಸಂಪತ್ತಿನಲ್ಲಿ ಸ್ತ್ರೀಯರಿಗೂ ಪಾಲಿದೆ. ಕಡಿಮೆ ಇರಲಿ ಅಥವಾ ಹೆಚ್ಚಿರಲಿ ಈ ಪಾಲು (ಅಲ್ಲಾಹನ ಕಡೆಯಿಂದ) ನಿಶ್ಚಿತವಾಗಿದೆ." (ಪವಿತ್ರ ಕುರ್‌ಆನ್, 4:7)

"ಪಾಲಾಗುವ ಸಂದರ್ಭದಲ್ಲಿ (ಹಕ್ಕುದಾರರಲ್ಲದ) ಸಂಬಂಧಿಕರು, ಅನಾಥರು ಮತ್ತು ನಿರ್ಗತಿಕರು ಬಂದರೆ ಅವರಿಗೂ ಏನಾದರೂ ಕೊಡಿರಿ. ಅವರೊಡನೆ ಸೌಜನ್ಯದ ಮಾತುಗಳನ್ನಾಡಿರಿ." (ಪವಿತ್ರ ಕುರ್‌ಆನ್, 4:8)

"ಅಲ್ಲಾಹನು ನಿಮ್ಮ ಸಂತಾನಗಳ ವಿಷಯದಲ್ಲಿ ಹೀಗೆ ಆದೇಶಿಸುತ್ತಾನೆ -

- ಪುರುಷನಿಗೆ, ಈರ್ವರು ಸ್ತ್ರೀಯರಿಗೆ ಸಮಾನವಾದ ಪಾಲಿದೆ.

- (ಮೃತನ ಉತ್ತರಾಧಿಕಾರಿಗಳಾಗಿ) ಈರ್ವರು ಸ್ತ್ರೀಯರಿದ್ದರೆ (ಪುತ್ರಿಯರು) ಅವರಿಗೆ ವಾರೀಸು ಸೊತ್ತಿನಿಂದ ಮೂರನೆಯ ಎರಡಂಶ ಕೊಡಲಾಗುವುದು.

- ಒಬ್ಬಳೇ ಮಗಳಿದ್ದರೆ ಆಕೆಗೆ ಅರ್ಧಾಂಶ.

- ಮೃತನಿಗೆ ಮಕ್ಕಳಿದ್ದರೆ ಮಾತಾಪಿತರಲ್ಲಿ ಪ್ರತಿಯೊಬ್ಬರಿಗೂ ಸೊತ್ತಿನ $^1/_6$ ಅಂಶವಾಗಿದೆ.

- ಮೃತನಿಗೆ ಮಕ್ಕಳಿಲ್ಲದೆ ಮಾತಾಪಿತರು ಮಾತ್ರ ಹಕ್ಕುದಾರರಾಗಿದ್ದರೆ ತಾಯಿಗೆ $^1/_3$ ದೊರೆಯುತ್ತದೆ.

- ಜತೆಯಲ್ಲಿ ಸಹೋದರ ಅಥವಾ ಸಹೋದರಿಯರಿದ್ದರೆ ತಾಯಿಯ ಪಾಲು $^1/_6$ ಆಗಿರುವುದು.

- ಮೃತನು ಮಾಡಿದ ವಸಿಯ್ಯತ್ (ಉಯಿಲು) ಮತ್ತು ಸಾಲ ಸಂದಾಯ ಮಾಡಿದ ಬಳಿಕ (ಹೀಗೆ ಮಾಡಬೇಕು) -

ನಿಮ್ಮ ಮಾತಾಪಿತರ ಮತ್ತು ಮಕ್ಕಳ ಪೈಕಿ ನಿಮಗೆ ಪ್ರಯೋಜನದ ದೃಷ್ಟಿಯಿಂದ ಯಾರು ಸಮೀಪದವರೆಂಬುದು ನಿಮಗೆ ತಿಳಿಯದು. ಅಲ್ಲಾಹನು ನಿಶ್ಚಯಿಸಿದ ಪಾಲುಗಳಿವು.

"ನಿಶ್ಚಯವಾಗಿಯೂ ಅಲ್ಲಾಹನು ಸಕಲವನ್ನು ಬಲ್ಲವನೂ ಮಹಾ ಯುಕ್ತಿಪೂರ್ಣನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 4:11)

"ನಿಮ್ಮ ಪತ್ನಿಯರು ಮಕ್ಕಳಿಲ್ಲದವರಾಗಿದ್ದರೆ ಅವರು ಬಿಟ್ಟು ಹೋದುದರಲ್ಲಿ ಅರ್ಧಾಂಶ ನಿಮಗೆ ಸಿಗುವುದು. ಮಕ್ಕಳಿದ್ದರೆ ಅವರು ಮಾಡಿದ್ದ ವಸಿಯ್ಯತನ್ನು ಈಡೇರಿಸಿದ ಮತ್ತು ಸಾಲಗಳನ್ನು ಪಾವತಿ ಮಾಡಿದ ಬಳಿಕ ಉಳಿಯುವ ಸೊತ್ತಿನ ನಾಲ್ಕನೆಯ ಒಂದಂಶ ನಿಮ್ಮದು. ನೀವು ಮಕ್ಕಳಿಲ್ಲದವರಾಗಿದ್ದರೆ ನೀವು ಬಿಟ್ಟುಹೋದ ಸೊತ್ತಿನ ಕಾಲಂಶಕ್ಕೆ ಅವರು ಹಕ್ಕುದಾರರಾಗುವರು. ಮಕ್ಕಳಿದ್ದರೆ ನೀವು ಮಾಡಿದ್ದ ವಸಿಯ್ಯತ್ ಮತ್ತು ಸಾಲಗಳ ಪಾವತಿಯಾದ ಬಳಿಕ ಉಳಿಯುವ ಸೊತ್ತಿನ ಎಂಟನೆಯ ಒಂದಂಶ ಅವರದಾಗುವುದು. (ವಾರೀಸುದಾರರೊಳಗೆ ಪಾಲಾಗತಕ್ಕ ಸೊತ್ತನ್ನು ಬಿಟ್ಟುಹೋದ) ಪುರುಷನಾಗಲಿ, ಸ್ತ್ರೀಯಾಗಲಿ ಮಕ್ಕಳಿಲ್ಲದವರಾಗಿದ್ದು ಅವರ ಮಾತಾಪಿತರೂ ಜೀವಂತರಾಗಿಲ್ಲದಿದ್ದು ಅವರಿಗೆ ಒಬ್ಬ ಸಹೋದರ ಅಥವಾ ಒಬ್ಬ ಸಹೋದರಿ ಇದ್ದರೆ, ಅವರಲ್ಲಿ ಪ್ರತಿಯೊಬ್ಬರಿಗೆ ಆರನೆಯ ಒಂದಂಶ ಸಿಗುವುದು ಮತ್ತು ಸಹೋದರ ಸಹೋದರಿಯರು ಒಬ್ಬರಿಗಿಂತ ಅಧಿಕ ಸಂಖ್ಯೆಯಲ್ಲಿದ್ದರೆ, ಮೃತರು ಮಾಡಿದ್ದ ಹಾನಿಕಾರಕವಲ್ಲದ ವಸಿಯ್ಯತನ್ನು ಈಡೇರಿಸಿದ ಮತ್ತು ಸಾಲಗಳನ್ನು ಪಾವತಿ ಮಾಡಿದ ಬಳಿಕ ಉಳಿಯುವ ಒಟ್ಟು ಸೊತ್ತಿನ ಮೂರನೆಯ ಒಂದಂಶದಲ್ಲಿ ಅವರೆಲ್ಲರೂ ಭಾಗಿಗಳಾಗುವರು. ಇವು ಅಲ್ಲಾಹನ ಅಪ್ಪಣೆಗಳು ಮತ್ತು ಅಲ್ಲಾಹನು ಸರ್ವಜ್ಞನೂ ಸಹನಶೀಲನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 4:12)

"ಇವು ಅಲ್ಲಾಹನು ನಿಶ್ಚಯಿಸಿದ ಮೇರೆಗಳು. ಅಲ್ಲಾಹನ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡುವವನಿಗೆ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಅಲ್ಲಾಹನು ಪ್ರವೇಶ ಕೊಡುವನು. ಅವನು ಆ ಸ್ವರ್ಗೋದ್ಯಾನಗಳಲ್ಲಿ ಸದಾ ವಾಸಿಸುತ್ತಿರುವನು ಮತ್ತು ಇದೇ ಅಮೋಘ ವಿಜಯವಾಗಿದೆ."

(ಪವಿತ್ರ ಕುರ್‌ಆನ್, 4:13)

"ಅಲ್ಲಾಹನ ಹಾಗೂ ಅವನ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡುವವನನ್ನು ಮತ್ತು ಅವನು ನಿರ್ಣಯಿಸಿ ಕೊಟ್ಟ ಮೇರೆಗಳನ್ನು ಮೀರುವವನನ್ನು ಅಲ್ಲಾಹನು ನರಕಾಗ್ನಿಗೆ ತಳ್ಳುವನು. ಅದರಲ್ಲಿ ಅವನು ಸದಾಕಾಲವಿರುವನು ಮತ್ತು ಅವನಿಗೆ ನಿಂದನಾತ್ಮಕ ಶಿಕ್ಷೆ ಇದೆ." (ಪವಿತ್ರ ಕುರ್‌ಆನ್, 4:14)

"ಓ ಪೈಗಂಬರರೇ, ಜನರು ನಿಮ್ಮೊಡನೆ 'ಕಲಾಲಃ'ದ ಕುರಿತು ಧರ್ಮವಿಧಿ ಕೇಳುತ್ತಾರೆ. ಹೇಳಿರಿ: ಅಲ್ಲಾಹ್ ನಿಮಗೆ ಹೀಗೆ ಧರ್ಮವಿಧಿ ಕೊಡುತ್ತಾನೆ. ಯಾರಾದರೂ ಸಂತತಿಹೀನನಾಗಿ ಮೃತಪಟ್ಟರೆ ಮತ್ತು ಅವನಿಗೆ ಒಬ್ಬಳೇ ಸಹೋದರಿ ಇದ್ದರೆ, ಅವಳು ಅವನು ಬಿಟ್ಟುಹೋಗುವ ಸೊತ್ತಿನಿಂದ ಅರ್ಧಾಂಶ ಪಡೆಯುವಳು ಮತ್ತು ಸಹೋದರಿಯು ಸಂತತಿ ವಿಹೀನಳಾಗಿ ಮೃತಳಾದರೆ, ಸಹೋದರನು ಅವಳ ವಾರೀಸುದಾರನಾಗುವನು. ಮೃತನ ವಾರೀಸುದಾರರಾಗಿ ಇಬ್ಬರು ಸಹೋದರಿಯರಿದ್ದರೆ ಅವರು ಸೊತ್ತಿನ ಮೂರರಲ್ಲೆರಡಂಶದ ಹಕ್ಕುದಾರರಾಗುವರು. ಅನೇಕ ಮಂದಿ ಸಹೋದರ ಸಹೋದರಿಯರಿದ್ದರೆ ಸ್ತ್ರೀಯರಿಗೆ ಒಂದು ಮತ್ತು ಪುರುಷರಿಗೆ

ಇಮ್ಮಡಿ ಪಾಲು ಸಿಗುವುದು. ನೀವು ದಾರಿತಪ್ಪಿ ಅಲೆಯದಂತೆ ಅಲ್ಲಾಹನು ನಿಮಗಾಗಿ ಆದೇಶಗಳನ್ನು ವಿವರಿಸುತ್ತಾನೆ. ಅಲ್ಲಾಹನು ಪ್ರತಿಯೊಂದು ವಸ್ತುವಿನ ಜ್ಞಾನವುಳ್ಳವ ನಾಗಿರುತ್ತಾನೆ." (ಪವಿತ್ರ ಕುರ್‌ಆನ್, 4:176)

"ಮಾತಾಪಿತರೂ ಸಮೀಪದ ಬಂಧುಗಳೂ ಬಿಟ್ಟಗಲಿದ ಪ್ರತಿಯೊಂದು ವಸ್ತುವಿಗೂ ವಾರೀಸು ಹಕ್ಕುದಾರರನ್ನು ನಾವು ನಿಶ್ಚಯಿಸಿರುತ್ತೇವೆ. ಇನ್ನು ನೀವು ವಚನ ಕೊಟ್ಟವರಿದ್ದರೆ ಅವರ ಪಾಲನ್ನು ಅವರಿಗೆ ಕೊಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಸಕಲ ವಸ್ತುಗಳ ಬಗ್ಗೆ ಸಾಕ್ಷಿಯಾಗಿರುತ್ತಾನೆ." (ಪವಿತ್ರ ಕುರ್‌ಆನ್, 4:33)

"ಅಲ್ಲಾಹನ ಗ್ರಂಥದಲ್ಲಿ ರಕ್ತ ಸಂಬಂಧಿಕರು ಪರಸ್ಪರ ಹೆಚ್ಚು ಹಕ್ಕುದಾರರು. ನಿಶ್ಚಯವಾಗಿಯೂ ಅಲ್ಲಾಹನು ಸಕಲ ವಸ್ತುಗಳ ಜ್ಞಾನಿಯಾಗಿರುತ್ತಾನೆ."

(ಪವಿತ್ರ ಕುರ್‌ಆನ್, 8:75)

"ಅವನು ನಿಮ್ಮ ದತ್ತುಪುತ್ರರನ್ನು ನಿಮ್ಮ ಸ್ವಂತ ಪುತ್ರರನ್ನಾಗಿ ಮಾಡಿರುವುದೂ ಇಲ್ಲ. ಇವೆಲ್ಲ ನೀವು ನಿಮ್ಮ ಬಾಯಿಯಿಂದ ಹೊರಡಿಸಿ ಬಿಡುವ ಮಾತುಗಳು."

(ಪವಿತ್ರ ಕುರ್‌ಆನ್, 33:4)

## ಐತಿಹಾಸಿಕ ಹಿನ್ನೆಲೆ

ವಾರೀಸು ಹಕ್ಕಿನ ಕುರಿತು ಅವತೀರ್ಣವಾದ ಕುರ್‌ಆನ್ ವಚನಗಳ ಹಿನ್ನೆಲೆಯ ಕುರಿತು ವಿದ್ವಾಂಸರಲ್ಲಿ ವಿವಿಧ ಅಭಿಪ್ರಾಯಗಳಿವೆ.-

1. ಔಸ್ ಬಿನ್ ಸಾಬಿತ್ ಎಂಬೋರ್ವ ಸಹಾಬಿ ನಿಧನರಾದರು. ಅವರಿಗೆ ನಾಲ್ವರು ಪುತ್ರಿಯರಿದ್ದರು. ಅವರ ಎಲ್ಲ ಸೊತ್ತನ್ನು ಪಿತೃ ಸಹೋದರನ ಪುತ್ರರು ಪಡೆದುಕೊಂಡರು. ಆದ್ದರಿಂದ ಅವರ ಪತ್ನಿಯು ಪ್ರವಾದಿಯವರ(ಸ) ಬಳಿ ಬಂದು ಹೇಳಿದಳು, "ಔಸ್ ಬಿನ್ ಸಾಬಿತ್ ಧಾರಾಳ ಸಂಪತ್ತನ್ನು ಬಿಟ್ಟು ಇಹಲೋಕ ತ್ಯಜಿಸಿದ್ದಾರೆ. ಈಗ ಅವರ ಸಂಪತ್ತನ್ನು ಪಿತೃ ಸಹೋದರನ ಪುತ್ರರಾದ ಕತಾದ ಮತ್ತು ಉರ್ಫೂತ್ ಸ್ವಾಧೀನಪಡಿಸಿದ್ದಾರೆ. ಪುತ್ರಿಯರಿಗೆ ಏನೂ ಉಳಿದಿಲ್ಲ. ಅವರನ್ನು ನಾನು ಸಾಕುತ್ತಿದ್ದೇನೆ. ಅವರಿಗೆ ಆಹಾರ ಪಾನೀಯಕ್ಕೆ ಗತಿಯಿಲ್ಲ. ಅವರನ್ನು ಪೋಷಿಸಲು ನನ್ನಲ್ಲಿ ಸಾಮರ್ಥ್ಯವಿಲ್ಲ." ಆಗ ಪ್ರವಾದಿಯವರು(ಸ) ಅವರೊಡನೆ ಮರಳಿ ಹೋಗಿ ಅಲ್ಲಾಹನ ತೀರ್ಪು ಬರುವ ತನಕ ಕಾಯುವಂತೆ ಆದೇಶಿಸಿದರು. ಹೀಗೆ ಅನ್ನಿಸಾ ಅಧ್ಯಾಯದ ಮೊದಲ ಭಾಗದ, ಸೊತ್ತು ವಿಭಜನೆಗೆ ಸಂಬಂಧಿಸಿದ ವಚನಗಳು ಅವತೀರ್ಣವಾದುವು. ಆ ಪ್ರಕಾರ ಪ್ರವಾದಿ ಯವರು(ಸ) ಕತಾದ ಮತ್ತು ಉರ್ಫೂತ್‌ರೊಡನೆ ಔಸ್‌ರ ಸೊತ್ತನ್ನು ಅವರ ಪತ್ನಿಗೂ ಪುತ್ರಿಯರಿಗೂ ನೀಡಲು ಆದೇಶಿಸಿದರು.

2. ಉಮ್ಮು ಕಜ್ಜರ ಪತಿ ನಿಧನರಾದರು. ಅವರಿಗೆ ಓರ್ವ ಪುತ್ರಿ ಮತ್ತು ಸಹೋದರನಿದ್ದನು. ಆ ಸ್ತ್ರೀಯು ಪ್ರವಾದಿಯವರ(ಸ) ಬಳಿ ಬಂದು ಹೇಳಿದರು, "ನನ್ನ

ಪತಿಯು ಪರಲೋಕ ಸೇರಿದ್ದಾರೆ. ನಾನು ಮತ್ತು ಅವರ ಓರ್ವ ಪುತ್ರಿಯು ಬದುಕಿದ್ದೇವೆ. ಆದರೂ ನಮಗೆ ಅವರಿಂದ ವಾರೀಸು ಸೊತ್ತು ದೊರೆತಿಲ್ಲ." ಆಗ ಮೃತನ ಸಹೋದರ ಹೇಳಿದ, "ಅಲ್ಲಾಹನ ಪ್ರವಾದಿಗಳೇ, ಕುದುರೆಯ ಮೇಲೇರಿ ಶಸ್ತ್ರ ಹಿಡಿದು ವೈರಿಗಳನ್ನು ಎದುರಿಸದವರಿಗೆ ಸೊತ್ತಿನಲ್ಲಿ ಪಾಲು ನೀಡಬೇಕೇ? ಹಣ ಸಂಪಾದಿಸದವರಿಗೆ ಹಣವೇ?" ಆಗ ಅನ್ನಿಸಾ ಅಧ್ಯಾಯದ 7ನೇ ವಚನ ಅವತೀರ್ಣವಾಯಿತು.

3. ಓರ್ವ ಸಹಾಬಿ ನಿಧನರಾದರು. ಅವರಿಗೆ ಪುಟ್ಟ ಮಕ್ಕಳಿದ್ದರು. ಓರ್ವ ಹಿರಿಯ ಸಹೋದರನೂ ಇದ್ದರು. ಮೃತನ ಸೊತ್ತನ್ನು ಅವರು ಸ್ವಾಧೀನಪಡಿಸಿದರು. ವಿವಾದವು ಪ್ರವಾದಿಯವರ(ಸ) ಬಳಿಗೆ ಬಂದಾಗ ಆ ಸಹೋದರ ಹೇಳಿದ: "ಪುಟ್ಟ ಮಕ್ಕಳು ಪಯಣಿಸುವುದಿಲ್ಲ ಅಥವಾ ಹಣ ಸಂಪಾದಿಸುವುದಿಲ್ಲವಲ್ಲ." ಈ ಸಂದರ್ಭದಲ್ಲಿ ಅಲ್ಲಾಹನು ಅನ್ನಿಸಾ ಅಧ್ಯಾಯದ 7ನೇ ವಚನವನ್ನು ಅವತೀರ್ಣಗೊಳಿಸಿದನು.

4. ಸಅದ್ ಬಿನ್ ರಬೀಲ್ ಉಹುದ್ ಯುದ್ಧದಲ್ಲಿ ಹುತಾತ್ಮರಾದರು. ಅವರಿಗೆ ಪತ್ನಿ ಮತ್ತು ಇಬ್ಬರು ಪುತ್ರಿಯರಿದ್ದರು. ಆದರೆ ಅವರ ಪಿತೃ ಸಹೋದರ ಬಂದು ಎಲ್ಲ ಸೊತ್ತನ್ನು ಸ್ವಾಧೀನಪಡಿಸಿದರು. ಈ ಘಟನೆಯನ್ನು ಹ. ಜಾಬಿರ್(ರ) ಹೀಗೆ ವಿವರಿಸಿದ್ದಾರೆ; ಸಅದ್ ಬಿನ್ ರಬೀಲ್‌ರ ಪತ್ನಿ ಈರ್ವರು ಪುತ್ರಿಯರೊಂದಿಗೆ ಪ್ರವಾದಿಯ ಬಳಿ ಬಂದು ಹೀಗೆಂದರು, "ಅಲ್ಲಾಹನ ಪ್ರವಾದಿಗಳೇ! ಇವರು ನಮ್ಮ ಜತೆ ಉಹುದ್ ಯುದ್ಧದಲ್ಲಿ ಭಾಗವಹಿಸಿ ಹುತಾತ್ಮರಾದ ಸಅದ್ ಬಿನ್ ರಬೀಲ್‌ರ ಪುತ್ರಿಯರು. ಇವರ ಪಿತೃ ಸಹೋದರನು ಇವರ ಎಲ್ಲ ಸಂಪತ್ತನ್ನೂ ತೆಗೆದು ಕೊಂಡಿದ್ದಾರೆ. ಇವರಿಗೆ ಏನನ್ನೂ ಉಳಿಸಿಲ್ಲ. ಸಂಪತ್ತಿಲ್ಲದೆ ಇವರನ್ನು ಯಾರೂ ವಿವಾಹವಾಗಲಾರರು." ಅದನ್ನು ಕೇಳಿ ಪ್ರವಾದಿಯವರು(ಸ) ಹೀಗೆಂದರು, "ಅವರ ವಿಷಯದಲ್ಲಿ ಅಲ್ಲಾಹನೇ ತೀರ್ಮಾನಿಸುವನು." ಹಾಗೆಯೇ ವಾರೀಸು ಹಕ್ಕಿಗೆ ಸಂಬಂಧಿಸಿದ ಕುರ್‌ಆನ್ ವಚನಗಳು ಅವತೀರ್ಣಗೊಂಡುವು. ತರುವಾಯ ಅವರು ಆ ಮಕ್ಕಳ ಪಿತೃ ಸಹೋದರನೊಡನೆ, ಸಅದ್‌ನ ಸೊತ್ತಿನ $^{2}/_{3}$ ಭಾಗ ಪುತ್ರಿಯರಿಗೂ $^{1}/_{8}$ ಪತ್ನಿಗೂ ನೀಡಲು ಆಜ್ಞಾಪಿಸಿದರು. ಉಳಿದದ್ದು ನಿಮ್ಮ ಪಾಲೆಂದೂ ತಿಳಿಸಿದರು.

ವಾರೀಸು ಹಕ್ಕು ನಿಯಮಗಳ ಅವತೀರ್ಣದ ಹಿನ್ನೆಲೆಯ ಮಟ್ಟಿಗೆ ಕೊನೆಯ ಅಭಿಪ್ರಾಯವು ಪ್ರಬಲವಾಗಿದೆ.

## ದತ್ತು ಹಕ್ಕು

ದತ್ತು ಪುತ್ರರನ್ನು ಅರಬರು ಸಾಮಾನ್ಯ ಮಕ್ಕಳಂತೆ ಪರಿಗಣಿಸುತ್ತಿದ್ದರು. ರಕ್ತ ಸಂಬಂಧಿಕರಂತೆ ಅವರಿಗೂ ವಾರೀಸು ಹಕ್ಕನ್ನು ನೀಡಲಾಗುತ್ತಿತ್ತು. ಇಸ್ಲಾಮಿನ ಆರಂಭ ಹಂತದಲ್ಲಿಯೂ ಅದು ರೂಢಿಯಲ್ಲಿತ್ತು. ತರುವಾಯ ಇಸ್ಲಾಮ್ ಆ ಪದ್ಧತಿಯನ್ನು ಸಂಪೂರ್ಣವಾಗಿ ನಿಷೇಧಿಸಿತು. ದತ್ತು ತಂದೆಯಿಂದ ದತ್ತು ಪುತ್ರ ವಾರೀಸು ಪಡೆಯುವುದನ್ನು ಮಾತ್ರವಲ್ಲ, ಅವರ ಜತೆ ಸೇರಿಸಿ ಹೇಳುವುದನ್ನೂ ನಿಷೇಧಿಸಿತು.

"ಅವನು ನಿಮ್ಮ ದತ್ತುಪುತ್ರರನ್ನು ನಿಮ್ಮ ಸ್ವಂತ ಪುತ್ರರನ್ನಾಗಿ ಮಾಡಿರುವುದೂ ಇಲ್ಲ. ಇವೆಲ್ಲ ನೀವು ನಿಮ್ಮ ಬಾಯಿಯಿಂದ ಹೊರಡಿಸಿ ಬಿಡುವ ಮಾತುಗಳು. ಆದರೆ ಅಲ್ಲಾಹನು ಕೇವಲ ಸತ್ಯವಾದುದನ್ನೇ ಹೇಳುತ್ತಾನೆ. ಅವನೇ ಸನ್ಮಾರ್ಗದ ಕಡೆಗೆ ಮಾರ್ಗದರ್ಶನ ನೀಡುತ್ತಾನೆ. ದತ್ತು ಮಕ್ಕಳನ್ನು ಅವರ ಪಿತರಿಗೆ ಸಂಬಂಧಿಸಿ ಕರೆಯಿರಿ. ಇದು ಅಲ್ಲಾಹನ ಬಳಿ ಹೆಚ್ಚು ನ್ಯಾಯೋಚಿತವಾದ ವಿಷಯವಾಗಿದೆ ಮತ್ತು ನಿಮಗೆ ಅವರ ಪಿತರು ಯಾರೆಂದು ತಿಳಿದಿರದಿದ್ದರೆ ಅವರು ನಿಮ್ಮ ಧರ್ಮ ಸಹೋದರರು ಮತ್ತು ಮಿತ್ರರಾಗಿರುತ್ತಾರೆ." (ಪವಿತ್ರ ಕುರ್‌ಆನ್, 33:4-5)

ಹೀಗೆ ಇಸ್ಲಾಮ್ ದತ್ತು ಸಂಪ್ರದಾಯವನ್ನೂ ಅದರ ಆಧಾರದಲ್ಲಿದ್ದ ವಾರೀಸು ಹಕ್ಕು ಕ್ರಮವನ್ನೂ ಕೊನೆಗೊಳಿಸಿತು.

## ಸ್ತ್ರೀಯರ ಹಕ್ಕು

ಇಸ್ಲಾಮಿನಲ್ಲಿ ಹೆಣ್ಣಿಗೆ ಪುರುಷನ ಅರ್ಧಾಂಶ ಸೊತ್ತು ಮಾತ್ರ ದೊರೆಯುತ್ತದೆ. ಇದು ಸ್ತ್ರೀಯರೊಂದಿಗೆ ಅನ್ಯಾಯ ಮತ್ತು ಪಕ್ಷಪಾತವೆಂದು ಹಲವರು ಆರೋಪಿಸುತ್ತಾರೆ. ಆದರೆ ಇಸ್ಲಾಮ್ ನ್ಯಾಯೋಚಿತವಾದ ಅನೇಕ ಕಾರಣಗಳಿಂದ ಈ ಕ್ರಮವನ್ನು ನಿರ್ಣಯಿಸಿದೆ-

1. ಸ್ತ್ರೀಯ ಸಂರಕ್ಷಣೆಯ ಸಂಪೂರ್ಣ ಹೊಣೆಯು ಪುರುಷನ ಮೇಲಿದೆ. ಮಗ, ತಂದೆ, ಅಥವಾ ಸಹೋದರ ಇತ್ಯಾದಿ ಯಾರಾದರೊಬ್ಬರು ಅವರಿಗೆ ಸಂರಕ್ಷಣೆ ನೀಡಬೇಕಾದುದು ಕಡ್ಡಾಯವಾಗಿದೆ.

2. ಸ್ತ್ರೀಯು ಯಾರಿಗೂ ಖರ್ಚಿಗೆ ಕೊಡಬೇಕಾಗಿಲ್ಲ. ಪುರುಷನ ಸ್ಥಿತಿ ತದ್ವಿರುದ್ಧವಾಗಿದೆ. ಕುಟುಂಬ ಮತ್ತು ಸಂಬಂಧಿಕರಿಗೂ ಇತರ ಆಶ್ರಿತರಿಗೂ ಆತನು ಖರ್ಚಿಗೆ ಕೊಡಬೇಕಾಗುತ್ತದೆ.

3. ಪುರುಷನ ಖರ್ಚು ಮತ್ತು ಆರ್ಥಿಕ ಹೊಣೆಗಾರಿಕೆಯು ಸ್ತ್ರೀಗಿಂತ ಬಹಳಷ್ಟು ಅಧಿಕವಾಗಿದೆ. ಪತ್ನಿ ಮತ್ತು ಮಕ್ಕಳ ಚಿಕಿತ್ಸೆ, ಆಹಾರ, ವಸ್ತ್ರ, ವಸತಿ, ಮಕ್ಕಳ ಶಿಕ್ಷಣ ಇತ್ಯಾದಿ ಆತನ ಹೊಣೆಗಾರಿಕೆಯಲ್ಲಿ ಸೇರಿದೆ.

4. ವಿವಾಹಕ್ಕೆ ಸಂಬಂಧಿಸಿದ ಎಲ್ಲ ಖರ್ಚುಗಳನ್ನು ಪತಿಯೇ ನಿಭಾಯಿಸಬೇಕು. ಸ್ತ್ರೀಗೆ ವಿವಾಹ ಧನ(ಮಹ್ರ್) ದೊರೆಯುತ್ತದೆ.

ರೂ. 15,000 ಬಿಟ್ಟು ಹೋದ ಮೃತನಿಗೆ ಓರ್ವ ಪುತ್ರ ಮತ್ತು ಓರ್ವ ಪುತ್ರಿಯಿದ್ದರೆ– ಪುತ್ರನಿಗೆ ರೂ. 10,000 ಮತ್ತು ಪುತ್ರಿಗೆ ರೂ. 5,000 ಪಾಲು ದೊರೆಯುತ್ತದೆ. ಈರ್ವರೂ ವಿವಾಹ ಪ್ರಾಯದವರಾಗಿದ್ದರೆ ಪುತ್ರನು ತನ್ನ ಪತ್ನಿಗೆ ಮಹ್ರ್, ಆಹಾರ, ವಸ್ತ್ರ, ವಸತಿ ಇತ್ಯಾದಿಗಳನ್ನು ಒದಗಿಸುವುದು ಕಡ್ಡಾಯವಾಗಿದೆ. ಆದರೆ ಸ್ತ್ರೀಗೆ ಅವೆಲ್ಲವೂ ಆಕೆಯ ವರನಿಂದ ದೊರೆಯುತ್ತದೆ. ಆದ್ದರಿಂದ ಮಗನ ರೂ. 10,000 ಕೂಡಲೇ ಖರ್ಚಾಗಿ

ಹೋದರೆ, ಮಗಳ ರೂ. 5,000 ಕ್ಕೆ ಪುನಃ ಮಹ್ರ್‌ನ ಹಣ ಸೇರಿ ಹೆಚ್ಚುತ್ತದೆ. ಅದರಿಂದ ಆಕೆಯು ಸ್ವಂತ ಅವಶ್ಯಕತೆಗಳಿಗಾಗಿಯೂ ಖರ್ಚು ಮಾಡಬೇಕಾಗಿಲ್ಲ.

ಹೀಗಿದ್ದರೂ ಸ್ತ್ರೀಗೆ ಇಸ್ಲಾಮ್ ಆಕೆಯೊಂದಿಗಿನ ಕರುಣೆ ಮತ್ತು ವಿಶೇಷ ಪರಿಗಣನೆಯಿಂದಾಗಿ ಆಕೆಗೆ ಸಮಾಜದಲ್ಲಿ ಗೌರವಾದರಗಳನ್ನು ಗಳಿಸಿ ಕೊಡಲಿಕ್ಕಾಗಿ ವಾರೀಸು ಹಕ್ಕನ್ನು ನೀಡಿದೆ. ಸ್ವಯಂ ಸಂಪಾದಿಸಿ ಶೇಖರಿಸುವ ಮತ್ತು ವ್ಯಯಿಸುವ ಸ್ವಾತಂತ್ರ್ಯವನ್ನು ಇಸ್ಲಾಮ್ ಮಹಿಳೆಗೆ ನೀಡಿದೆ. ಪತಿ, ಪಿತ, ಮಗ, ಸಹೋದರ ಹೀಗೆ ಯಾರೂ ಆಕೆಯ ಅನುಮತಿಯಿಲ್ಲದೆ ಅದರಿಂದ ಏನನ್ನೂ ತೆಗೆಯುವಂತಿಲ್ಲ. ವಾರೀಸು ಹಕ್ಕು ಸಮಗ್ರವಾದ ಇಸ್ಲಾಮೀ ಜೀವನ ವ್ಯವಸ್ಥೆಯ ಭಾಗವಾಗಿರುವುದರಿಂದ ಕೇವಲ ಅದನ್ನು ಮಾತ್ರ ಬೇರ್ಪಡಿಸಿ ವಿಶ್ಲೇಷಿಸುವುದು ಸರಿಯಲ್ಲ. ಅದು ತಪ್ಪು ತಿಳುವಳಿಕೆಗೆ ಕಾರಣವಾಗಬಹುದು.

## ವಾರೀಸು ನಿಯಮಗಳು

ಅರಬಿ ಭಾಷೆಯಲ್ಲಿ ವಾರೀಸು ಹಕ್ಕನ್ನು 'ಮೀರಾಸ್' ಎನ್ನಲಾಗುತ್ತದೆ. ಪ್ರಸ್ತುತ ನಿಯಮಗಳಿಗೆ ಸಂಬಂಧಿಸಿಯಲ್ಲದಿದ್ದರೂ 'ಮೀರಾಸ್' ಎಂಬ ಪದವನ್ನು ಪವಿತ್ರ ಕುರ್‌ಆನ್ ಪ್ರಯೋಗಿಸಿದೆ. **(3:180)** ವಾರೀಸು ಹಕ್ಕು ನಿಯಮಗಳನ್ನು ಪ್ರತಿಪಾದಿಸುವ ಶಿಕ್ಷಣ ಶಾಖೆಗೆ 'ಇಲ್ಮುಲ್ ಮೀರಾಸ್' ಎಂಬಂತೆಯೇ 'ಇಲ್ಮುಲ್ ಫರಾಇದ್' ಎಂದೂ ಹೇಳಲಾಗುತ್ತದೆ. 'ಫರಾಇದ್' ಎಂಬುದು 'ನಿರ್ಣಯಿಸಲಾದ' ಎಂಬ ಅರ್ಥವಿರುವ 'ಫರೀದ' ಎಂಬ ಅರಬೀ ಪದದ ಬಹುವಚನವಾಗಿದೆ. ವಾರೀಸು ಸೊತ್ತು ನಿಯಮಗಳನ್ನು ವಿವರಿಸುತ್ತಾ ಕುರ್‌ಆನ್ ಹೇಳುತ್ತದೆ, 'ಫರೀದತನ್ ಮಿನಲ್ಲಾಹ್' (ಅವು ಅಲ್ಲಾಹನು ನಿರ್ಣಯಿಸಿದ ಪಾಲುಗಳಾಗಿವೆ. **4:11)** ಕುರ್‌ಆನಿನ ಪ್ರಸ್ತುತ ಪ್ರಯೋಗದಿಂದ ವಾರೀಸು ಹಕ್ಕು ನಿಯಮಗಳಿಗೆ 'ಫರಾಇದ್' ಎಂಬ ಹೆಸರು ಬಂದಿದೆ. ಪ್ರವಾದಿಯವರ(ಸ) ಕಾಲದಿಂದಲೇ ವಾರೀಸು ಹಕ್ಕು ನಿಯಮಗಳನ್ನು ಆ ಹೆಸರಿನಿಂದ ಕರೆಯಲಾಗುತ್ತಿತ್ತು. ಪ್ರವಾದಿ(ಸ) ಹೇಳಿದ್ದಾರೆ, "ನೀವು ಫರಾಇದ್ ಕಲಿಯಿರಿ ಮತ್ತು ಕಲಿಸಿರಿ. ಅದು ಜ್ಞಾನದ ಅರ್ಧಾಂಶವಾಗಿದ್ದು, ಮರೆತು ಹೋಗುವ ಸಾಧ್ಯತೆಯಿದೆ. ನನ್ನ ಸಮುದಾಯದಲ್ಲಿ ಪ್ರಥಮವಾಗಿ ಬೇರ್ಪಡಿಸಲಾಗುವ ವಿಷಯವೂ ಅದೇ ಆಗಿರುವುದು."

**(ಇಬ್ನುಮಾಜಃ, ದಾರು ಕುತ್ನಿ, ಹಾಕಿಮ್)**

ವಾರೀಸು ಹಕ್ಕು ನಿಯಮಗಳಲ್ಲಿ ಮೂರು ಘಟಕಗಳಿವೆ. ಒಡೆಯ (ದಾಯಕ), ವಾರೀಸುದಾರರು ಮತ್ತು ವಾರೀಸು ಸೊತ್ತು (ದಾಯಧನ). ಸಂಪತ್ತನ್ನು ಬಿಟ್ಟು ನಿಧನನಾದ ವ್ಯಕ್ತಿಯು ದಾಯಕ. ಮೃತನ ಸಂಪತ್ತಿನಲ್ಲಿ ಕಾನೂನು ಬದ್ಧ ಹಕ್ಕು ದೊರೆಯುವ ಸಂಬಂಧಿಕರು ವಾರೀಸುದಾರರು. ಮರಣ ಹೊಂದಿದಾತನು ಬಿಟ್ಟು ಹೋದ ಸಂಪತ್ತು ದಾಯಧನವಾಗಿದೆ.

ದಾಯಧನದಲ್ಲಿ ಪಾಲು ದೊರೆಯಲು ಕೆಲವು ಕಾರಣ ಮತ್ತು ಶರತ್ತುಗಳಿವೆ-

**ಕಾರಣಗಳು:**

**1. ಕುಲ ಸಂಬಂಧ:** ಕುಲ ಸಂಬಂಧವು ಜನನದಿಂದ ಖಾತ್ರಿಯಾಗುತ್ತದೆ. ಈ ಗಣದಲ್ಲಿ ದಿವಂಗತನ ಮಾತಾಪಿತರು, ಪಿತೃ ಸಹೋದರರು, ಸಂತಾನಗಳು, ಒಂದೇ ತಾಯಿ ತಂದೆಯರಿಗೆ ಅಥವಾ ತಂದೆಗೆ ಇಲ್ಲವೆ ತಾಯಿಗೆ ಹುಟ್ಟಿದ ಸಹೋದರ ಸಹೋದರಿಯರು ಸೇರಿದ್ದಾರೆ.

**2. ವಿವಾಹ ಸಂಬಂಧ:** ಪತಿ ಪತ್ನಿಯರು ವಿವಾಹ ಸಂಬಂಧದ ವ್ಯಾಪ್ತಿಯಲ್ಲಿ ಬರುತ್ತಾರೆ. ಮರಳಿ ಸ್ವೀಕರಿಸುವ ರೀತಿಯಲ್ಲಿ ವಿವಾಹ ವಿಚ್ಛೇದನ ನಡೆದ ಬಳಿಕ ಇದ್ದತ್‌ನ ಅವಧಿಯು ಮುಗಿಯುವುದಕ್ಕಿಂತ ಮುಂಚೆ ಪತಿ-ಪತ್ನಿಯರಲ್ಲಿ ಯಾರಾದರೊಬ್ಬರು ಮರಣ ಹೊಂದಿದರೆ ಉಳಿದವರಿಗೆ ದಾಯಧನದಲ್ಲಿ ಹಕ್ಕು ಪ್ರಾಪ್ತವಾಗುತ್ತದೆ. ಪತಿಯು ರೋಗಿಯಾಗಿದ್ದಾಗ ಪತ್ನಿಗೆ ಹಕ್ಕು ನಿಷೇಧಿಸುವ ಸಲುವಾಗಿ ಮರಳಿ ಸ್ವೀಕರಿಸಲಾಗದ ರೀತಿಯಲ್ಲಿ ಆಕೆಯ ವಿವಾಹ ವಿಚ್ಛೇದನ ನಡೆಸಿದರೆ ಇದ್ದತ್‌ನ ಅವಧಿಯು ಮುಗಿಯುವುದಕ್ಕಿಂತ ಮುಂಚೆ ಪತಿಯು ಮರಣ ಹೊಂದಿದರೆ ಆಕೆಗೆ ಹಕ್ಕು ದೊರೆಯುತ್ತದೆ. ಪತಿಯು ನಿಧನಗೊಂಡರೆ ಪತ್ನಿಗೆ ಹಕ್ಕು ದೊರೆಯಲಾರದು. ಪತ್ನಿಯು ನಿಧನಗೊಂಡರೆ ಪತಿಗೆ ಹಕ್ಕು ದೊರೆಯಲಾರದು. ಹಕ್ಕು ನಿಷೇಧವನ್ನು ಗುರಿಯಾಗಿಟ್ಟು ಪತ್ನಿಯ ವಿವಾಹ ವಿಚ್ಛೇದನ ಮಾಡುವ ಮೂಲಕ ಆತ ಸ್ವತಃ ಹಕ್ಕನ್ನು ನಿಷೇಧಿಸಿರುವುದೇ ಅದಕ್ಕೆ ಕಾರಣ. ಹಕ್ಕು ನಿಷೇಧಿಸಲಿಕ್ಕಾಗಿ ಸ್ತ್ರೀಯು ಪುರುಷನನ್ನು ತೊರೆದರೂ ಇದೇ ಸ್ಥಿತಿ. ಇದ್ದತ್ ಮುಗಿಯುವುದಕ್ಕಿಂತ ಮುಂಚೆ ಸ್ತ್ರೀ ಮರಣ ಹೊಂದಿದರೆ ಪುರುಷನಿಗೆ ಹಕ್ಕು ದೊರೆಯುತ್ತದೆ. ತದ್ವಿರುದ್ಧವಾದರೆ ದೊರೆಯಲಾರದು. ಆಕೆಯು ಸ್ವಯಂ ಹಕ್ಕು ನಿಷೇಧಿಸಿರುವುದೇ ಈ ಸ್ಥಿತಿಗೆ ಕಾರಣ.

**3. ವಲಾಅ್:** 'ವಲಾಅ್' ಎಂಬ ಪದಕ್ಕೆ ಮೇಲ್ವಿಚಾರಣೆ, ಸಂರಕ್ಷಣೆ, ಸ್ನೇಹ ಸಂಬಂಧ ಇತ್ಯಾದಿ ಅರ್ಥಗಳಿವೆ. ಗುಲಾಮ ಮತ್ತು ಗುಲಾಮನಿಗೆ ವಿಮೋಚನೆ ನೀಡಿದ ವ್ಯಕ್ತಿಯ (ಪುರುಷ ಅಥವಾ ಸ್ತ್ರೀಯಾಗಿರ ಬಹುದು) ಪರಸ್ಪರ ಕಾನೂನುಬದ್ಧ ಸಂಬಂಧವೇ ವಲಾಅ್. ವಲಾವುಲ್ ಇತ್‌ಕ್, ವಲಾಉನ್ನಿಅ್‌ಮ ಎಂಬೀ ಹೆಸರುಗಳಿಂದ 'ವಲಾಅ್' ಖ್ಯಾತವಾಗಿದೆ. ಈ ಸಂಬಂಧದ ಆಧಾರದಲ್ಲಿ ಗುಲಾಮನನ್ನು ಸ್ವತಂತ್ರಗೊಳಿಸಿದ ಒಡೆಯ ಮತ್ತು ಆತನ ಅಭಾವದಲ್ಲಿ ಆತನ ವಾರೀಸುದಾರರು, ವಿಮೋಚಿತನಾದ ಗುಲಾಮನ ದಾಯಧನದ ಹಕ್ಕುದಾರರಾಗುತ್ತಾರೆ. ಆತನಿಗೆ ಇತರ ಹಕ್ಕುದಾರರು ಯಾರೂ ಇಲ್ಲದಿರುವಾಗ ಮಾತ್ರ ಹೀಗೆ ಸಂಭವಿಸುತ್ತದೆ. ಪ್ರವಾದಿ(ಸ) ಹೇಳಿದ್ದಾರೆ: "ವಲಾಅ್ ರಕ್ತ ಸಂಬಂಧಕ್ಕೆ ಸಮಾನವಾಗಿದೆ. ಅದನ್ನು ಮಾರಬಾರದು, ದಾನವಾಗಿಯೂ ನೀಡಬಾರದು."

**(ಇಬ್ನು ಹಿಬ್ಬಾನ್, ಹಕೀಮ್)**

## ದಾಯಹಕ್ಕು ಸಿಂಧುವಾಗುವ ಶರತ್ತುಗಳು

1. ದಾಯಕನ ಮರಣವು ಖಚಿತವಾಗಿರಬೇಕು. 2. ದಾಯಕನು ಮರಣ ಹೊಂದುವಾಗ ಹಕ್ಕುದಾರನು ಜೀವಂತವಿರಬೇಕು. 3. ಹಕ್ಕು ಸಿಗಲು ಮೇಲೆ ಹೇಳಿದ ಮೂರು ಕಾರಣಗಳಲ್ಲಿ ಒಂದು ದೃಢವಾಗಬೇಕು.

## ಮರಣ ಹೊಂದಿದವನ ಆಸ್ತಿಗೆ ಸಂಬಂಧಿಸಿದ ಕರ್ತವ್ಯಗಳು

ದಾಯಧನಕ್ಕೆ ಸಂಬಂಧಿಸಿ ಕೆಳಗೆ ಹೇಳಲಾದ ಕರ್ತವ್ಯ ನಿರ್ವಹಿಸಿದ ಬಳಿಕ ಬಾಕಿ ಉಳಿಯುವ ಧನವು ವಾರೀಸು ಹಕ್ಕಾಗಿ ಸಂಬಂಧಿಕರಿಗೆ ದೊರೆಯುತ್ತದೆ-

**1. ಅಡವಿರಿಸಿದ ವಸ್ತುಗಳು:** ಕಾಲಾವಧಿ ತಿಳಿಸಿ ಪಡೆದ ಸರಕು, ಅನ್ಯಾಯವಾಗಿ ಸ್ವಾಧೀನ ಪಡಿಸಿದ ಧನ, ಮುಂಗಡ ಬಾಡಿಗೆ ಇತ್ಯಾದಿ. ಇಂತಹ ಸೊತ್ತು ವಿತ್ತಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಅವುಗಳಿಗೆ ಸಂಬಂಧಪಟ್ಟ ಜನರನ್ನು ಭೇಟಿಯಾಗಿ ಮೊದಲು ಬಗೆಹರಿಸಬೇಕು.

**2. ಮಯ್ಯಿತ್ ದಫನದ ವೆಚ್ಚ:** ಮೃತನಿಗೆ ಸಾಲವಿದ್ದರೂ ಅವನ ಧನದಿಂದ ದಫನ ಕ್ರಿಯೆಗೆ ಬೇಕಾದ ಖರ್ಚನ್ನು ತೆಗೆಯಬೇಕು.

**3. ಸಾಲ:** ಇದು ಎರಡು ರೀತಿಯಲ್ಲಿರಬಹುದು- 1) ಅಲ್ಲಾಹನಿಗೆ ಸಂಬಂಧಿಸಿದ್ದು- ಝಕಾತ್, ಪಾಪ ಕೃತ್ಯಗಳ ಪ್ರಾಯಶ್ಚಿತ್ತ ಇತ್ಯಾದಿ. 2) ಸೃಷ್ಟಿಗಳಿಗೆ ಸಂಬಂಧಿಸಿದ್ದು. ಈ ಎರಡು ಬಗೆಯ ಸಾಲವನ್ನೂ ದಾಯಧನದಿಂದ ಸಂದಾಯ ಮಾಡಬೇಕು.

**4. ಉಯಿಲು (ವಸಿಯ್ಯತ್):** ಮೇಲೆ ಹೇಳಿದ ಮೂರು ವಿಧದ ಹೊಣೆಯನ್ನು ಪೂರೈಸಿದ ಬಳಿಕ ಉಳಿಯುವ ಧನದ ಒಂದಂಶವನ್ನು ಮರಣ ಹೊಂದಿದಾತನ ವಸಿಯ್ಯತ್ ಏನಾದರೂ ಇದ್ದರೆ ಅದಕ್ಕಾಗಿ ಮೀಸಲಿಡಬೇಕು. ಧನದ $^1/_3$ ಅಂಶವು ಅದರ ಗರಿಷ್ಠ ಪ್ರಮಾಣವಾಗಿದೆ. ಮಿಕ್ಕುಳಿದ ಧನವನ್ನು ಮಾತ್ರ ಹಕ್ಕುದಾರರಿಗೆ ವಿತರಣೆ ಮಾಡಬೇಕು.

## ಅನರ್ಹರು

ಹಕ್ಕುದಾರನನ್ನು ದಾಯಧನಕ್ಕೆ ಅನರ್ಹಗೊಳಿಸುವ ವಿಷಯಗಳು:

1. **ಗುಲಾಮ:** ಗುಲಾಮನಿಗೆ ಒಡೆತನದ ಹಕ್ಕು ಇಲ್ಲ. ಆದ್ದರಿಂದ ಆತನಿಗೆ ವಾರೀಸು ಹಕ್ಕು ಇರುವುದಿಲ್ಲ.

2. **ಕೊಲೆಪಾತಕ:** ದಾಯಕನ ಕೊಲೆಗೆ ಹೊಣೆಗಾರನಾದ ಸಂಬಂಧಿಕನಿಗೆ ದಾಯಧನದಲ್ಲಿ ಹಕ್ಕಿರುವುದಿಲ್ಲ. ಕೊಲೆಯು ಮನಃಪೂರ್ವಕ ನಡೆದಿದ್ದರೂ ಪ್ರಮಾದವಶಾತ್ ನಡೆದಿದ್ದರೂ ನಿಯಮವು ಸಮಾನವಾಗಿರುವುದು.

3. ಧರ್ಮ ಭೇದ: ದಾಯಕ ಅಥವಾ ಹಕ್ಕುದಾರರಲ್ಲೋರ್ವನು ಮುಸ್ಲಿಮ್ ಇನ್ನೊಬ್ಬ ಮುಸ್ಲಿಮೇತರನಾಗಿದ್ದರೆ ಪರಸ್ಪರ ಹಕ್ಕು ಇರಲಾರದು. ಪರಂಪರಾಗತವಾಗಿ ಮುಸ್ಲಿಮೇತರನಾದ ವ್ಯಕ್ತಿಯೂ ಧರ್ಮಭ್ರಷ್ಟನೂ ಈ ವಿಷಯದಲ್ಲಿ ಸಮಾನರಾಗಿದ್ದಾರೆ.

## ಹಕ್ಕುದಾರರು

ದಾಯಧನದ ಹಕ್ಕುದಾರರನ್ನು ಈ ಕೆಳಗಿನಂತೆ ವಿಂಗಡಿಸಬಹುದು:

1. ನಿಶ್ಚಿತ ಪಾಲುದಾರರು (ದವುಲ್ ಫುರೂದ್).
2. ನಿಶ್ಚಿತ ಪಾಲು ಕಳೆದು ಮಿಕ್ಕುಳಿದುದನ್ನು ಪಡೆಯುವವರು (ಅಸ್ವಬಃ)
3. ಈ ಎರಡು ವರ್ಗಗಳಲ್ಲಿಯೂ ಸೇರಿಲ್ಲದ ಕುಟುಂಬಿಕರು (ದವುಲ್ ಅರ್ಹಾಮ್).
4. ವಲಾಅ್(ಗುಲಾಮನನ್ನು ವಿಮೋಚನೆಗೊಳಿಸಿದ ಸಂಬಂಧ)ನಿಂದ ಹಕ್ಕು ಪಡೆಯುವವರು.

## ನಿಶ್ಚಿತ ಪಾಲು

ಕುರ್ಆನ್ ಹಕ್ಕುದಾರರಿಗೆ 6 ರೀತಿಯಲ್ಲಿ ಪಾಲುಗಳನ್ನು (ಫುರೂದ್) ನಿರ್ಣಯಿಸಿದೆ: $^1/_2$, $^1/_4$, $^1/_8$, $^2/_3$, $^1/_3$ ಮತ್ತು $^1/_6$.

ನಿಶ್ಚಿತ ಪಾಲು ದೊರೆಯಬೇಕಾದ 12 ವಿಭಾಗಗಳಿವೆ. ಅದರಲ್ಲಿ ಪುರುಷರು ನಾಲ್ವರಿದ್ದರೆ ಸ್ತ್ರೀಯರು 8 ಮಂದಿಯಿದ್ದಾರೆ.

## ಪುರುಷರು

1. ಪತಿ.
2. ಪಿತ.
3. ಪಿತಾಮಹ, ಪ್ರಪಿತಾಮಹ (ಪಿತಾಮಹನ ಪಿತ) ಈ ಕ್ರಮದಲ್ಲಿ ಮೇಲೆ ಇರುವವರು.
4. ತಾಯಿಯ ಮೂಲಕವಾಗಿರುವ ಸಹೋದರ(ಮಾತೃಜ).

## ಸ್ತ್ರೀಯರು

1. ಪತ್ನಿ.
2. ತಾಯಿ.
3. ಅಜ್ಜಿ, ಅಜ್ಜಿಯ ತಾಯಿ ಹೀಗೆ ಈ ಕ್ರಮದಲ್ಲಿ ಮೇಲೆ ಇರುವವರು.
4. ಮಗಳು.

5. ಮಗನ ಮಗಳು, ಮಗನ ಮಗನ ಮಗಳು. ಆ ಕ್ರಮದಲ್ಲಿ ಕೆಳಗಿರುವವರು.
6. ಸ್ವಂತ ಸಹೋದರಿ.
7. ತಂದೆಯ ಮೂಲಕವಾಗಿರುವ ಸಹೋದರಿ(ಪಿತೃಜೆ).
8. ತಾಯಿಯ ಮೂಲಕವಾಗಿರುವ ಸಹೋದರಿ(ಮಾತೃಜೆ).

## ಪತಿಯ ಪಾಲು

"ಅಲ್ಲಾಹನು ನಿಮ್ಮ ಮಕ್ಕಳ ಬಗ್ಗೆ ನಿಮಗೆ ಹೀಗೆ ಆದೇಶವನ್ನೀಯುತ್ತಾನೆ; ಪುರುಷನಿಗೆ, ಇಬ್ಬರು ಸ್ತ್ರೀಯರಿಗೆ ಸಮಾನವಾದ ಪಾಲಿದೆ. (ಮೃತನ ಉತ್ತರಾಧಿಕಾರಿಗಳಾಗಿ) ಇಬ್ಬರಿಗಿಂತ ಹೆಚ್ಚು ಮಂದಿ ಪುತ್ರಿಯರಿದ್ದರೆ ಅವರಿಗೆ ಉತ್ತರಾಧಿಕಾರದ ಸೊತ್ತಿನಿಂದ ಮೂರನೆಯ ಎರಡಂಶ ಕೊಡಲಾಗುವುದು ಮತ್ತು ಒಬ್ಬಳೇ ಮಗಳಿದ್ದರೆ ಅವಳಿಗೆ ಅರ್ಧಾಂಶ. ಮೃತನು ಮಕ್ಕಳಿದ್ದವನಾಗಿದ್ದರೆ ಮಾತಾಪಿತರಲ್ಲಿ ಪ್ರತಿಯೊಬ್ಬರಿಗೂ ಸೊತ್ತಿನ ಆರನೆಯ ಒಂದಂಶ ಸಿಗಬೇಕು. ಅವನು ಮಕ್ಕಳಿಲ್ಲದವನಾಗಿದ್ದು ಮಾತಾಪಿತರೇ ಅವನ ವಾರೀಸುದಾರರಾಗಿರುವಾಗ ತಾಯಿಗೆ ಮೂರನೆಯ ಒಂದಂಶ ಕೊಡಬೇಕು. ಮೃತನಿಗೆ ಸಹೋದರ ಸಹೋದರಿಯರೂ ಇದ್ದರೆ, ತಾಯಿಯು ಆರನೆಯ ಒಂದಂಶಕ್ಕೆ ಹಕ್ಕುದಾರಳಾಗುವಳು. ಮೃತನು ಮಾಡಿದ 'ವಸಿಯ್ಯತ್' (ಉಯಿಲು) ಪೂರ್ತಿಗೊಳಿಸಿದ ಮತ್ತು ಅವನ ಮೇಲಿರುವ ಸಾಲಗಳ ಸಂದಾಯ ಆದ ಅನಂತರವೇ (ಈ ಪಾಲುಗಳನ್ನು ಹಂಚಲಾಗುವುದು). ನಿಮ್ಮ ಮಾತಾಪಿತರ ಮತ್ತು ಮಕ್ಕಳ ಪೈಕಿ ನಿಮಗೆ ಪ್ರಯೋಜನದ ದೃಷ್ಟಿಯಿಂದ ಯಾರು ಸಮೀಪದವರೆಂಬುದು ನಿಮಗೆ ತಿಳಿಯದು. ಅಲ್ಲಾಹನು ನಿಶ್ಚಯಿಸಿದ ಪಾಲುಗಳಿವು. ನಿಶ್ಚಯವಾಗಿಯೂ ಅಲ್ಲಾಹನು ಸಕಲವನ್ನು ಬಲ್ಲವನೂ ಮಹಾ ಯುಕ್ತಿಪೂರ್ಣನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 4: 11)

ಮರಣದ ವೇಳೆ ವಿವಾಹ ಸಂಬಂಧವು ಉಳಿದಿದ್ದರೆ ಮಾತ್ರ ಪತಿ-ಪತ್ನಿಯರು ಪರಸ್ಪರ ಹಕ್ಕುದಾರರಾಗುತ್ತಾರೆ. ಸಂಬಂಧವನ್ನು ಸಂಪೂರ್ಣವಾಗಿ ಕಡಿಯುವ ರೀತಿಯಲ್ಲಿ ವಿವಾಹ ವಿಚ್ಛೇದನ (ತಲಾಕ್ ಬಾಯಿನ್) ಮಾಡಲ್ಪಟ್ಟ ಸ್ತ್ರೀಯ ಸೊತ್ತಿನಲ್ಲಿ ಪತಿಗೂ ಪತಿಯ ಸೊತ್ತಿನಲ್ಲಿ ಪತ್ನಿಗೂ ಹಕ್ಕಿರುವುದಿಲ್ಲ. ಮರಳಿ ಸ್ವೀಕರಿಸಬಹುದಾದ ತಲಾಕ್ ಆಗಿದ್ದರೆ ಇದ್ದತ್‌ನ ಅವಧಿಯಲ್ಲಿ ಮರಣ ಹೊಂದಿದರೆ ಹಕ್ಕಿದೆ. ಕಾನೂನು ಪ್ರಕಾರ ಸಂಬಂಧ ಉಳಿದಿರುವುದೇ ಅದಕ್ಕೆ ಕಾರಣ.

## ತಂದೆಯ ಹಕ್ಕುಗಳು

ತಂದೆಯ ಹಕ್ಕುಗಳಿಗೆ ಇಸ್ಲಾಮಿನಲ್ಲಿ 3 ಹಂತಗಳಿವೆ:

1. ನಿಶ್ಚಿತ ಪಾಲು ಮಾತ್ರ ದೊರೆಯುವ ಹಂತ.
2. ಮಿಗತೆ ಧನವನ್ನು ಸಂಪೂರ್ಣವಾಗಿ ಗಳಿಸುವ ಹಂತ.

3. ನಿಶ್ಚಿತ ಪಾಲು ಮತ್ತು ಮಿಗತೆ ಧನ ಎರಡನ್ನೂ ಗಳಿಸುವ ಹಂತ.

ಮೃತನಿಗೆ ಹಕ್ಕುದಾರನಾಗಿ ಕೇವಲ ಗಂಡು ಮಕ್ಕಳಿರುವಾಗ ತಂದೆಗೆ ಕೇವಲ $^1/_6$ ದೊರೆಯುತ್ತದೆ. ಮೃತನಿಗೆ ಹಕ್ಕುದಾರರಾಗಿ ಮಕ್ಕಳು ಅಥವಾ ಇತರ ಪಾಲುಗಾರರಿಲ್ಲದಿದ್ದರೆ ಎಲ್ಲ ಹಣವೂ ತಂದೆಗೆ ದೊರೆಯುತ್ತದೆ. ಮೃತನಿಗೆ ಹಕ್ಕುದಾರರಾಗಿ ಹೆಣ್ಣು ಮಕ್ಕಳು ಮಾತ್ರವಿದ್ದರೆ ನಿಶ್ಚಿತ $^1/_6$ ಅಂಶಕ್ಕಿಂತ ಹೊರತಾಗಿ ಅವರ ಪಾಲು ಕಳೆದು ಮಿಗತೆಯಿರುವುದೂ ತಂದೆಗೆ ದೊರೆಯುತ್ತದೆ. ಉದಾ: ಮೃತನಿಗೆ ಮಕ್ಕಳು, ತಾಯಿ ಮತ್ತು ತಂದೆ ಹಕ್ಕುದಾರರಾಗಿದ್ದರೆ ಮಗಳು $^1/_2$ ($^3/_6$), ತಾಯಿ ($^1/_6$) ತಂದೆ $^1/_6$ + ಮಿಗತೆ ($^1/_6$) = $^2/_6$ "ಮೃತನು ಮಕ್ಕಳಿದ್ದವನಾಗಿದ್ದರೆ ಮಾತಾಪಿತರಲ್ಲಿ ಪ್ರತಿಯೊಬ್ಬರಿಗೂ ಸೊತ್ತಿನ $^1/_6$ ಅಂಶ ದೊರೆಯ ಬೇಕು. ಅವನು ಮಕ್ಕಳಿಲ್ಲದವನಾಗಿದ್ದು ಮಾತಾಪಿತರೇ ಅವನ ವಾರೀಸುದಾರರಾಗಿರುವಾಗ ತಾಯಿಗೆ $^1/_3$ ಅಂಶ ಕೊಡಬೇಕು" (4: 11). ಮಕ್ಕಳಿದ್ದರೆ $^1/_6$ ಅಂಶ ದೊರೆಯುವುದೆಂದು ಪ್ರಸ್ತುತ ವಚನವು ಸ್ಪಷ್ಟಪಡಿಸುತ್ತದೆ. ಕೇವಲ ತಂದೆ ತಾಯಿಗಳು ಹಕ್ಕುದಾರರಾಗಿರುವಾಗ ತಾಯಿಗೆ $^1/_3$ ಎಂದು ಹೇಳಿರುವುದರಿಂದ ಉಳಿದ $^2/_3$ ತಂದೆಗೆ ಎಂದು ಅಂದಾಜಿಸಬೇಕಾಗಿದೆ. ನಿಶ್ಚಿತ ಪಾಲಿನೊಂದಿಗೆ ಮಿಗತೆಯೂ ದೊರೆಯುವುದೆಂಬುದಕ್ಕೆ ಈ ಕೆಳಗಿನ ಹದೀಸ್ ಆಧಾರವಾಗಿದೆ.

"ನಿಶ್ಚಿತ ಪಾಲನ್ನು ಆಯಾ ವ್ಯಕ್ತಿಗಳಿಗೆ ನೀಡಬೇಕು. ಆ ಬಳಿಕ ಉಳಿದದ್ದು ಅತಿ ಹತ್ತಿರದ ಪುರುಷನಿಗಿರುವುದಾಗಿದೆ." (ಬುಖಾರಿ, ಮುಸ್ಲಿಮ್)

## ಪಿತಾಮಹನ ಹಕ್ಕು

ತಂದೆಯಿಲ್ಲದಿರುವಾಗ ತಂದೆಯ ತಂದೆಗೆ (ಪಿತಾಮಹ) ಪಾಲು ದೊರೆಯುತ್ತದೆ. ಪಿತನ ಬಗ್ಗೆ ಹೇಳಲಾದ ಮೂರು ಸ್ಥಿತಿಗಳು ಪಿತಾಮಹನಿಗೂ ಅನ್ವಯವಾಗುತ್ತದೆ. ಆದರೆ ಪಿತಾಮಹನಿಗೆ ಪಿತನಿಗಿಂತ ಸ್ವಲ್ಪ ವ್ಯತ್ಯಾಸವಿದೆ.

ಪಿತನು ತನ್ನ ತಾಯಿಯ ಹಕ್ಕನ್ನು ತಡೆಯುತ್ತಾನೆ. ಆದರೆ ಪಿತಾಮಹನು ಹಾಗೆ ಮಾಡುವುದಿಲ್ಲವೆಂಬುದು ಅವುಗಳಲ್ಲೊಂದು.

ಪತಿ-ಪತ್ನಿಯರಲ್ಲಿ ಒಬ್ಬರು, ತಂದೆ ಮತ್ತು ತಾಯಿ ಮಾತ್ರ ಹಕ್ಕುದಾರರಾಗಿರುವಾಗ ಪತ್ನಿಯ/ಪತಿಯ ಪಾಲು ಕಳೆದು ಉಳಿದ ಸೊತ್ತಿನ $^1/_3$ ತಾಯಿಗೆ ದೊರೆಯುತ್ತದೆ. ಅಲ್‌ಗರ್‍ರಾವಾನಿ ಎಂಬ ಹೆಸರಲ್ಲಿ ಕರೆಯಲಾಗುವ ಈ ಸಮಸ್ಯೆಯಲ್ಲಿ ತಂದೆಯ ಸ್ಥಾನದಲ್ಲಿ ಪಿತಾಮಹನಿದ್ದರೆ ಅಬೂ ಹನೀಫಾರ ಅಭಿಪ್ರಾಯದಂತೆ ತಾಯಿಯು ಒಟ್ಟು ದಾಯಧನದ $^1/_3$ ಪಡೆಯುತ್ತಾಳೆ. ಆದರೆ ತಂದೆಯ ಜತೆಯಲ್ಲಿ ದೊರೆಯುವುದಕ್ಕೆ ಸಮಾನವಾದ ಪಾಲು ಮಾತ್ರ ದೊರೆಯುವುದೆಂದು ಅಬೂ ಯೂಸುಫ್‌ರ ಅಭಿಮತ. ಪಿತ ಮತ್ತು ಪಿತಾಮಹರ ಮಧ್ಯೆಯಿರುವ ದ್ವಿತೀಯ ವ್ಯತ್ಯಾಸವು ಹೀಗಿದೆ- ತಾಯಿ ಮತ್ತು ತಂದೆ ಒಂದೇ ಆಗಿರುವ ಸಹೋದರರಿಗೂ ತಂದೆಯ ಮೂಲಕವಿರುವ ಸಹೋದರರಿಗೂ ತಂದೆಯು ಬದುಕಿದ್ದರೆ

ಹಕ್ಕಿಲ್ಲ. ಆದರೆ ಪಿತಾಮಹನು ಜೀವಿಸಿರುವ ಸ್ಥಿತಿಯಲ್ಲಿ ಇಂತಹ ಸಮಸ್ಯೆಯಿಲ್ಲವೆಂದು ಹೆಚ್ಚಿನ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

## ಕೇವಲ ತಾಯಿಯ ಮೂಲಕವಿರುವ ಸಹೋದರ (ಮಾತೃಜ) ಸಹೋದರಿ(ಮಾತೃಜೆ)ಯರ ಪಾಲು

ತಾಯಿಯ ಮೂಲಕವಿರುವ ಸಹೋದರರು ಎಂದರೆ ತಾಯಿಯ ಮಕ್ಕಳು. ಅವರಿಗೆ ಮೂರು ಸ್ಥಿತಿಯಿದೆ:

1. ಕೇವಲ ಒಬ್ಬರೇ ಇದ್ದರೆ- ಸ್ತ್ರೀಯಾಗಲಿ ಪುರುಷನಾಗಲಿ- $1/_6$.

2. ಅವರು ಒಬ್ಬರಿಗಿಂತ ಅಧಿಕ ಮಂದಿಯಿದ್ದರೆ ಒಟ್ಟು ಸೊತ್ತಿನ $1/_3$ ದೊರೆಯುವುದು. ಈ $1/_3$ ಪಾಲನ್ನು ಸ್ತ್ರೀಯರೂ ಪುರುಷರೂ ಸಮಾನವಾಗಿ ಹಂಚಿಕೊಳ್ಳುವರು.

3. ಮೃತನಿಗೆ ಸ್ತ್ರೀ ಅಥವಾ ಪುರುಷನಾಗಿ ಮಕ್ಕಳು ಅಥವಾ ಮಗನ ಮಕ್ಕಳು ಅಥವಾ ತಂದೆ, ಪಿತಾಮಹರಲ್ಲಿ ಯಾರಾದರೊಬ್ಬರು ಇದ್ದರೆ ಈ ವರ್ಗಕ್ಕೆ ದಾಯಧನದಲ್ಲಿ ಪಾಲಿಲ್ಲ. ದಾಯಕನು ಕಲಾಲಃ (ತಂದೆ ಮತ್ತು ಮಕ್ಕಳಿಲ್ಲದವ)ನಾಗಿರ ಬೇಕಾದುದು ಇವರಿಗೆ ಹಕ್ಕು ದೊರೆಯುವ ಶರತ್ತಾಗಿದೆ.

ತಾಯಿ ಅಥವಾ ತಾಯಿಯ ತಾಯಿ ಇರುವುದಾದರೆ ಆ ಕಾರಣದಿಂದ ಈ ವರ್ಗಕ್ಕೆ ಹಕ್ಕು ನಷ್ಟವಾಗುವುದಿಲ್ಲ.

"ನಿಮ್ಮ ಪತ್ನಿಯರು ಮಕ್ಕಳಿಲ್ಲದವರಾಗಿದ್ದರೆ ಅವರು ಬಿಟ್ಟು ಹೋದುದರಲ್ಲಿ ಅರ್ಧಾಂಶ ನಿಮಗೆ ಸಿಗುವುದು. ಮಕ್ಕಳಿದ್ದರೆ ಅವರು ಮಾಡಿದ್ದ ವಸಿಯ್ಯತನ್ನು ಈಡೇರಿಸಿದ ಮತ್ತು ಸಾಲಗಳನ್ನು ಪಾವತಿ ಮಾಡಿದ ಬಳಿಕ ಉಳಿಯುವ ಸೊತ್ತಿನ ನಾಲ್ಕನೆಯ ಒಂದಂಶ ನಿಮ್ಮದು. ನೀವು ಮಕ್ಕಳಿಲ್ಲದವರಾಗಿದ್ದರೆ ನೀವು ಬಿಟ್ಟುಹೋದ ಸೊತ್ತಿನ ಕಾಲಂಶಕ್ಕೆ ಅವರು ಹಕ್ಕುದಾರರಾಗುವರು. ಮಕ್ಕಳಿದ್ದರೆ ನೀವು ಮಾಡಿದ್ದ ವಸಿಯ್ಯತ್ ಮತ್ತು ಸಾಲಗಳ ಪಾವತಿಯಾದ ಬಳಿಕ ಉಳಿಯುವ ಸೊತ್ತಿನ ಎಂಟನೆಯ ಒಂದಂಶ ಅವರದಾಗುವುದು. (ವಾರೀಸುದಾರರೊಳಗೆ ಪಾಲಾಗತಕ್ಕ ಸೊತ್ತನ್ನು ಬಿಟ್ಟು ಹೋದ) ಪುರುಷನಾಗಲಿ, ಸ್ತ್ರೀಯಾಗಲಿ ಮಕ್ಕಳಿಲ್ಲದವರಾಗಿದ್ದು ಅವರ ಮಾತಾಪಿತರೂ ಜೀವಂತರಾಗಿಲ್ಲದಿದ್ದು ಅವರಿಗೆ ಒಬ್ಬ ಸಹೋದರ ಅಥವಾ ಒಬ್ಬ ಸಹೋದರಿ ಇದ್ದರೆ, ಅವರಲ್ಲಿ ಪ್ರತಿಯೊಬ್ಬರಿಗೆ ಆರನೆಯ ಒಂದಂಶ ಸಿಗುವುದು ಮತ್ತು ಸಹೋದರ ಸಹೋದರಿಯರು ಒಬ್ಬರಿಗಿಂತ ಅಧಿಕ ಸಂಖ್ಯೆಯಲ್ಲಿದ್ದರೆ, ಮೃತರು ಮಾಡಿದ್ದ ಹಾನಿಕಾರಕ ವಲ್ಲದ ವಸಿಯ್ಯತನ್ನು ಈಡೇರಿಸಿದ ಮತ್ತು ಸಾಲಗಳನ್ನು ಪಾವತಿ ಮಾಡಿದ ಬಳಿಕ ಉಳಿಯುವ ಒಟ್ಟು ಸೊತ್ತಿನ ಮೂರನೆಯ ಒಂದಂಶದಲ್ಲಿ ಅವರೆಲ್ಲರೂ ಭಾಗಿ ಗಳಾಗುವರು. ಇವು ಅಲ್ಲಾಹನ ಅಪ್ಪಣೆಗಳು ಮತ್ತು ಅಲ್ಲಾಹನು ಸರ್ವಜ್ಞನೂ ಸಹನಶೀಲನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 4: 12)

## ಪತ್ನಿಯ ಪಾಲು

"ಮಕ್ಕಳಿದ್ದರೆ ಅವರು ಮಾಡಿದ್ದ ವಸಿಯ್ಯತನ್ನು ಈಡೇರಿಸಿದ ಮತ್ತು ಸಾಲಗಳನ್ನು ಪಾವತಿ ಮಾಡಿದ ಬಳಿಕ ಉಳಿಯುವ ಸೊತ್ತಿನ ನಾಲ್ಕನೆಯ ಒಂದಂಶ ನಿಮ್ಮದು. ನೀವು ಮಕ್ಕಳಿಲ್ಲದವರಾಗಿದ್ದರೆ ನೀವು ಬಿಟ್ಟುಹೋದ ಸೊತ್ತಿನ ಕಾಲಂಶಕ್ಕೆ ಅವರು ಹಕ್ಕುದಾರ ರಾಗುವರು. ಮಕ್ಕಳಿದ್ದರೆ ನೀವು ಮಾಡಿದ್ದ ವಸಿಯ್ಯತ್ ಮತ್ತು ಸಾಲಗಳ ಪಾವತಿಯಾದ ಬಳಿಕ ಉಳಿಯುವ ಸೊತ್ತಿನ ಎಂಟನೆಯ ಒಂದಂಶ ಅವರದಾಗುವುದು."

(ಪವಿತ್ರ ಕುರ್‌ಆನ್, 4:12)

ಪತ್ನಿಯು ಒಬ್ಬಳು ಅಥವಾ ಅಧಿಕವಿದ್ದರೂ $^1/_4$ ಅಥವಾ $^1/_8$ ಮಾತ್ರ ದೊರೆಯುವುದು. ಒಂದಕ್ಕಿಂತ ಹೆಚ್ಚು ಪತ್ನಿಯರಿದ್ದರೆ ಅವರು ಸಮಾನವಾಗಿ ಹಂಚಿಕೊಳ್ಳಬೇಕು. ಮಕ್ಕಳು ಸ್ವಂತ ಮಕ್ಕಳು ಅಥವಾ ಮಗನ ಮಕ್ಕಳೋ ಆಗಬಹುದು.

## ತಾಯಿಯ ಪಾಲು

**ತಾಯಿಯ 3 ಸ್ಥಿತಿಗಳಿವೆ:**

1. $^1/_6$ ಪಾಲು ದೊರೆಯುವ ಸಂದರ್ಭ: ಇದು ದಾಯಕನಿಗೆ ಸಂತಾನ ಅಥವಾ ಒಂದಕ್ಕಿಂತ ಹೆಚ್ಚು ಸಹೋದರ ಅಥವಾ ಸಹೋದರಿಯರಿರುವಾಗ.

2. ಒಟ್ಟು ಸಂಪತ್ತಿನ $^1/_3$ ದೊರೆಯುವ ಸಂದರ್ಭ: ದಾಯಕನಿಗೆ ಸಂತಾನಗಳು ಅಥವಾ ಒಂದಕ್ಕಿಂತ ಅಧಿಕ ಸಹೋದರ ಸಹೋದರಿಯರು ಇಲ್ಲದಿರುವಾಗ ಇದು ಅನ್ವಯವಾಗುತ್ತದೆ.

3. ಪತಿ- ಪತ್ನಿಯರಲ್ಲಿ ಪ್ರತಿಯೊಬ್ಬರ ಪಾಲು ಕಳೆದು ಅಧಿಕವಿರುವುದರ $^1/_3$ ಅಂಶ ದೊರೆಯುವ ಸಂದರ್ಭ: ಇದು ದಾಯಧನದ ಹಕ್ಕುದಾರರಾಗಿ ತಂದೆ ತಾಯಿ ಮತ್ತು ಪತಿ ಪತ್ನಿಯರಲ್ಲಿ ಕೇವಲ ಒಬ್ಬರು ಇರುವ ಸಂದರ್ಭವಾಗಿದೆ. ಮೇಲೆ ಸೂಚಿಸಿರುವ ಅಲ್‌ಗರ್‍ರಾವಾನಿ ಎಂಬ ಸಮಸ್ಯೆಯು ಇದೇ ಆಗಿದೆ.

ಪತ್ನಿಯ ಹಕ್ಕಿನಲ್ಲಿ ಸೇರಿರುವ $^1/_4$ ಕಳೆದು ಉಳಿದುದರ $^1/_3$ ಭಾಗ ತಾಯಿಗೆ ದೊರೆಯುತ್ತದೆ. ಮಿಕ್ಕುಳಿದುದು ಆಂಶಿಕ ಹಕ್ಕುದಾರ (ಸ್ವಾಹಿಬ್ ಫರ್ದ್) ಮತ್ತು ಶಿಷ್ಟ ಹಕ್ಕುದಾರ (ಅಸ್ವಬಃ) ಎಂಬ ನೆಲೆಯಲ್ಲಿ ತಂದೆಗಿರುವುದಾಗಿದೆ. ಮೇಲಿನ ಪರಿಸ್ಥಿತಿಯಲ್ಲಿ ತಾಯಿಗೆ ಒಟ್ಟು ಸೊತ್ತಿನ $^1/_3$ ನೀಡಿದರೆ ತಂದೆಯ ಪಾಲು ತಾಯಿಯ ಪಾಲಿಗಿಂತ ಕಡಿಮೆಯಾಗುವುದು. ವಸ್ತುತಃ ಅದು, 'ಪುರುಷನಿಗೆ ಈರ್ವರು ಸ್ತ್ರೀಯರಿಗೆ ಸಮಾನವಾದ ಪಾಲಿದೆ' ಎಂಬ ಸಾಮಾನ್ಯ ನಿಯಮದ ಉಲ್ಲಂಘನೆಯಾಗುತ್ತದೆ. ಆದ್ದರಿಂದಲೇ ತಾಯಿಯ ಪಾಲನ್ನು ಮಿಕ್ಕಿರುವುದರ $^1/_3$ (ಸುಲುಸುಲ್‌ಬಾಕಿ) ಅಂಶವಾಗಿ ಕಡಿತಗೊಳಿಸಲಾಗಿದೆ. ತಾಯಿಯ ಹಕ್ಕಿಗೆ ಸಂಬಂಧಿಸಿದ ಕುರ್‌ಆನ್ ವಚನವು ತಂದೆಯ ಹಕ್ಕು ಎಂಬ ಶೀರ್ಷಿಕೆಯಲ್ಲಿ ಬಂದಿದೆ.

## ಅಜ್ಜಿಯ ಹಕ್ಕು

ತಂದೆ ಅಥವಾ ತಾಯಿಯ ತಾಯಿ, ಪಿತಾಮಹನ ತಾಯಿ, ಮಾತಾಮಹಿಯ ತಾಯಿ ಮುಂತಾಗಿ ಈ ಕ್ರಮದಲ್ಲಿ ಮೇಲೆ ಇರುವವರೆಲ್ಲರೂ ಇದರಲ್ಲಿ ಸೇರಿದ್ದಾರೆ. ದಾಯಕನೊಂದಿಗೆ ಅಜ್ಜಿಯ ಸಂಬಂಧವು ಈರ್ವರು ಸ್ತ್ರೀಯರ ನಡುವೆ ಓರ್ವ ಪುರುಷನು ಬಂದಿರಬಾರದೆಂಬ ಶರತ್ತಿದೆ. ಆದ್ದರಿಂದ ತಾಯಿಯ ತಂದೆಯ ತಾಯಿ, ಪಿತಾಮಹಿಯ ಪಿತಾಮಹಿ ಮುಂತಾದವರು ಹಕ್ಕು ದೊರೆಯುವ ಅಜ್ಜಿಯ ವ್ಯಾಖ್ಯೆಯಲ್ಲಿ ಸೇರುವುದಿಲ್ಲ. ಹಕ್ಕು ದೊರೆಯುವ ಅಜ್ಜಿಗೆ 'ಅಲ್ ಜದ್ದತುಸ್ಸಹೀಹಃ' ಎಂದೂ ಹಕ್ಕು ದೊರೆಯದ ಅಜ್ಜಿಯನ್ನು 'ಅಲ್ ಜದ್ದತುಲ್ ವಾಸಿದಃ' ಎಂದೂ ಪಾರಿಭಾಷಿಕವಾಗಿ ಹೇಳುತ್ತಾರೆ. ಹಕ್ಕುದಾರಳಾದ ಅಜ್ಜಿಗೆ ಎರಡು ಸ್ಥಿತಿಗಳಿವೆ.

1. $^1/_6$ ಅಂಶ ದೊರೆಯುವ ಸಂದರ್ಭ: ಈ ವಿಷಯದಲ್ಲಿ ತಾಯಿಯ ತಾಯಿ ಮತ್ತು ತಂದೆಯ ತಾಯಿ ಸಮಾನರಾಗಿದ್ದಾರೆ. ಒಬ್ಬರು ಮಾತ್ರ ಬದುಕಿದ್ದರೆ $^1/_6$ ಅಂಶ ಆ ವ್ಯಕ್ತಿಗೆ ದೊರೆಯುತ್ತದೆ. ಇಬ್ಬರೂ ಇದ್ದರೆ $^1/_6$ ಅಂಶವನ್ನು ಇಬ್ಬರೂ ಸಮನಾಗಿ ಹಂಚಿಕೊಳ್ಳಬೇಕು.

2. ಸ್ವಲ್ಪವೂ ಪಾಲು ದೊರೆಯದ ಸಂದರ್ಭ: ಇದು ತಾಯಿ ಇರುವಾಗಿನ ಸ್ಥಿತಿಯಾಗಿದೆ. ತಂದೆಯ ತಾಯಿಗೂ ತಾಯಿಯ ತಾಯಿಗೂ ಈ ಸಂದರ್ಭದಲ್ಲಿ ಹಕ್ಕು ಇರುವುದಿಲ್ಲ. ತಂದೆಯಿರುವಾಗ ತಂದೆಯ ತಾಯಿಗೂ ಹತ್ತಿರದ ಅಜ್ಜಿಯ ಸಾನ್ನಿಧ್ಯದಲ್ಲಿ ದೂರದ ಅಜ್ಜಿಗೂ ಹಕ್ಕಿರುವುದಿಲ್ಲ. ಅಜ್ಜಿಯ ಹಕ್ಕಿನ ಬಗ್ಗೆ ಕುರ್‌ಆನ್ ಪ್ರಸ್ತಾಪಿಸಿಲ್ಲ. ಹದೀಸ್‌ಗಳೇ ಅದರ ಆಧಾರವಾಗಿದೆ.

## ಪುತ್ರಿಯ ಪಾಲು

ಮಗಳ ಪಾಲನ್ನು ವಿವರಿಸುತ್ತಾ ಪವಿತ್ರ ಕುರ್‌ಆನ್ ಹೀಗೆ ಹೇಳಿದೆ:

**"ಅಲ್ಲಾಹನು ನಿಮ್ಮ ಮಕ್ಕಳ ಬಗ್ಗೆ ನಿಮಗೆ ಹೀಗೆ ಆದೇಶವನ್ನೀಯುತ್ತಾನೆ; ಪುರುಷನಿಗೆ, ಇಬ್ಬರು ಸ್ತ್ರೀಯರಿಗೆ ಸಮಾನವಾದ ಪಾಲಿದೆ. (ಮೃತನ ಉತ್ತರಾಧಿಕಾರಿಗಳಾಗಿ) ಇಬ್ಬರಿಗಿಂತ ಹೆಚ್ಚು ಮಂದಿ ಪುತ್ರಿಯರಿದ್ದರೆ ಅವರಿಗೆ ಉತ್ತರಾಧಿಕಾರದ ಸೊತ್ತಿನಿಂದ ಮೂರನೆಯ ಎರಡಂಶ ಕೊಡಲಾಗುವುದು[3] ಮತ್ತು ಒಬ್ಬಳೇ ಮಗಳಿದ್ದರೆ ಅವಳಿಗೆ ಅರ್ಧಾಂಶ." (4:11)**

ಮಗಳಿಗೆ ಮೂರು ಸ್ಥಿತಿಯಿದೆಯೆಂದು ಇದರಿಂದ ವ್ಯಕ್ತವಾಗುತ್ತದೆ:

1. ಸಂತಾನವಾಗಿ ಒಬ್ಬಳೇ ಮಗಳಿರುವ ಸ್ಥಿತಿ: ಆಗ ಆಕೆಗೆ ಸೊತ್ತಿನಲ್ಲಿ ಅರ್ಧಾಂಶವಿರುವುದು.
2. ಮಕ್ಕಳಾಗಿ ಎರಡು ಅಥವಾ ಹೆಚ್ಚು ಹುಡುಗಿಯರಿದ್ದರೆ: ಒಟ್ಟು ಸೊತ್ತಿನ $^2/_3$ ಅಂಶ ಅವರಿಗೆ ದೊರೆಯುತ್ತದೆ.
3. ಆಕೆಗೆ ಸಹೋದರರನಿರುವ ಸಂದರ್ಭ: ಈ ಸ್ಥಿತಿಯಲ್ಲಿ ಆಕೆಗೆ ಮಗನ ಪಾಲಿನ ಅರ್ಧಾಂಶ ದೊರೆಯುತ್ತದೆ.

## ಮಗನ ಮಗಳ ಪಾಲು

ಮಗನ ಮಗಳ ಪಾಲಿಗೆ ಆರು ಸ್ಥಿತಿಗಳಿವೆ:

1. ಕೇವಲ ಒಬ್ಬಳೇ ಇರುವ ಸ್ಥಿತಿ: ಆಗ ಆಕೆಗೆ ಸೊತ್ತಿನ ಅರ್ಧಾಂಶ ದೊರೆಯುತ್ತದೆ.

2. ಮಗನಿಗೆ ಒಂದಕ್ಕಿಂತ ಹೆಚ್ಚು ಹೆಣ್ಣು ಮಕ್ಕಳಿರುವ ಸ್ಥಿತಿ: ಆಗ ಅವರಿಗೆ $^2/_3$ ಅಂಶ ದೊರೆಯುತ್ತದೆ.

3. ಆಕೆಯ ಮಟ್ಟದಲ್ಲಿರುವ ಮಗನ ಮಗನಿರುವ ಸ್ಥಿತಿ: ಉದಾಹರಣೆಗೆ ಮಗನ ಮಗಳು ಮತ್ತು ಮಗನ ಮಗ. ಆಗ ಪುರುಷನಿಗೆ ಮಹಿಳೆಯ ಇಮ್ಮಡಿ ಪಾಲು ಎಂಬ ನಿಯಮವಿದೆ.

4. ಮೃತನ ಮಗಳು ಜೀವಂತವಿರುವ ಸ್ಥಿತಿ: ಆಗ ಆಕೆಗೂ $^1/_6$ ಅಂಶ ದೊರೆಯುವುದು. ಅದು ಹೆಣ್ಣು ಮಕ್ಕಳ ಹಕ್ಕಿಗೆ ಸೇರಿದ $^2/_3$ರಲ್ಲಿ ಸ್ವಂತ ಮಗಳಿಗೆ $^1/_2$ ನೀಡಿದ ಬಳಿಕ ಉಳಿದುದಾಗಿದೆ. ಮಗಳಿಗೆ ಅರ್ಧ ಮತ್ತು ಮಗನ ಮಗಳಿಗೆ $^1/_6$ ನೀಡುವ ಮೂಲಕ ಹುಡುಗಿಯರ ಒಟ್ಟು ಹಕ್ಕಿಗೆ ಸೇರಿದ $^2/_3$ ಅಂಶವನ್ನು ಭರ್ತಿಗೊಳಿಸಲಾಗುತ್ತದೆ. ಮಗನ ಒಂದಕ್ಕಿಂತ ಅಧಿಕ ಹುಡುಗಿಯರಿದ್ದರೆ ಪ್ರಸ್ತುತ $^1/_6$ ಅಂಶವನ್ನು ಅವರಲ್ಲಿ ಸಮಾನವಾಗಿ ಹಂಚಬೇಕು.

5. ಮೃತನಿಗೆ ಒಂದಕ್ಕಿಂತ ಹೆಚ್ಚು ಹೆಣ್ಣು ಮಕ್ಕಳಿರುವಾಗ ಮಗನ ಮಗಳಿಗೆ ಪಾಲಿರಲಾರದು. ಹೆಣ್ಣು ಮಕ್ಕಳ ಹಕ್ಕಿನ $^2/_3$ನ್ನು ಸ್ವಂತ ಮಗಳಿಗೆ ನೀಡುವುದರಿಂದ ಮಗನ ಮಗಳಿಗೆ ಇಲ್ಲಿ ಏನೂ ದೊರೆಯುವುದಿಲ್ಲ.

6. ಮೃತನಿಗೆ ಮಗ ಅಥವಾ ಅವಳಿಗಿಂತ ಉನ್ನತ ಸ್ತರದಲ್ಲಿರುವ ಮಗನ ಮಗ ಇರುವಾಗ ಆಕೆಗೆ ಪಾಲಿರಲಾರದು. ಮಗನ ಮಗ ಮತ್ತು ಮಗನ ಮಗನ ಮಗಳು ಉದಾಹರಣೆ. ಇಬ್ಬರಿಗೂ ಪರಸ್ಪರ ಸ್ಥಾನ ವ್ಯತ್ಯಾಸವಿರುವುದರಿಂದ ಮಗನ ಮಗನ ಮಗಳಿಗೆ ಪಾಲಿರುವುದಿಲ್ಲ.

## ಮಾತಾಪಿತರು ಒಂದೇ ಆಗಿರುವ ಸಹೋದರಿ(ಭ್ರಾತೃಜೆ)ಯರು

ಅವರಿಗೆ ಐದು ಸ್ಥಿತಿಗಳಿವೆ:

1. ಕೇವಲ ಒಬ್ಬಳೇ ಸಹೋದರಿಯಿರುವುದು. ಆಗ ಆಕೆಗೆ ದಾಯಧನದ ಅರ್ಧಾಂಶ ದೊರೆಯುತ್ತದೆ. ಕುರ್‌ಆನ್ ಹೇಳುತ್ತದೆ,

"ಓ ಪೈಗಂಬರರೇ, ಜನರು ನಿಮ್ಮೊಡನೆ 'ಕಲಾಲಃ'ದ ಕುರಿತು ಧರ್ಮವಿಧಿ ಕೇಳುತ್ತಾರೆ. ಹೇಳಿರಿ: ಅಲ್ಲಾಹ್ ನಿಮಗೆ ಹೀಗೆ ಧರ್ಮವಿಧಿ ಕೊಡುತ್ತಾನೆ. ಯಾರಾದರೂ ಸಂತತಿಹೀನನಾಗಿ ಮೃತಪಟ್ಟರೆ ಮತ್ತು ಅವನಿಗೆ ಒಬ್ಬಳೇ ಸಹೋದರಿ ಇದ್ದರೆ, ಅವಳು ಅವನು ಬಿಟ್ಟು ಹೋಗುವ ಸೊತ್ತಿನಿಂದ ಅರ್ಧಾಂಶ ಪಡೆಯುವಳು" (4:176)

2. ಅವರು ಒಂದಕ್ಕಿಂತ ಹೆಚ್ಚು ಮಂದಿಯಿರುವಾಗ ಅವರಿಗೆ ಸೊತ್ತಿನಲ್ಲಿ $^2/_3$ ಭಾಗ ದೊರೆಯುವುದು.

**"ಮೃತನ ವಾರೀಸುದಾರರಾಗಿ ಇಬ್ಬರು ಸಹೋದರಿಯರಿದ್ದರೆ ಅವರು ಸೊತ್ತಿನ ಮೂರರಲ್ಲೆರಡಂಶದ ಹಕ್ಕುದಾರರಾಗುವರು." (4:176)**

3. ಅವರೊಂದಿಗೆ ಅದೇ ಸ್ಥಾನದಲ್ಲಿರುವ ಒಂದು ಯಾ ಹೆಚ್ಚು ಸಹೋದರರಿರುವುದು. ಆಗ ಪುರುಷನಿಗೆ ಸ್ತ್ರೀಯ ಇಮ್ಮಡಿ ಎಂಬ ಪ್ರಮಾಣದಲ್ಲಿ ಅವರು ಅದನ್ನು ಒಟ್ಟಿಗೆ ಹಂಚಿಕೊಳ್ಳಬೇಕು. ಕುರ್‌ಆನ್ ಹೇಳುತ್ತದೆ,

**"ಅನೇಕ ಮಂದಿ ಸಹೋದರ ಸಹೋದರಿಯರಿದ್ದರೆ ಸ್ತ್ರೀಯರಿಗೆ ಒಂದು ಮತ್ತು ಪುರುಷರಿಗೆ ಇಮ್ಮಡಿ ಪಾಲು ಸಿಗುವುದು." (4:176)**

4. ಈ ವರ್ಗಕ್ಕೆ ಸೇರಿದ ಸಹೋದರಿ ಮತ್ತು ಮಗಳು, ಮಗನ ಮಗಳು ಅಥವಾ ಇಬ್ಬರೂ ಜತೆಯಲ್ಲಿರುವ ಸ್ಥಿತಿ- ಹಾಗಾದರೆ ಮಗಳು ಮತ್ತು ಮಗನ ಮಗಳು ಪಾಲು ಪಡೆದ ಬಳಿಕ ಉಳಿದುದಕ್ಕೆ ಸಹೋದರಿಯು ಹಕ್ಕುದಾರ(ಅಸಬಃ)ಳಾಗಿರುತ್ತಾಳೆ.

ಉದಾ: ಮಗಳು ಮತ್ತು ಸಹೋದರಿಯರಿದ್ದರೆ ಮಗಳಿಗೆ ಅರ್ಧ, ಸಹೋದರಿಗೆ ಅರ್ಧ. ಮಗಳು, ಮಗನ ಮಗಳು ಮತ್ತು ಸಹೋದರಿಯಿದ್ದರೆ ಮಗಳಿಗೆ ಅರ್ಧ. ಮಗನ ಮಗಳಿಗೆ $^1/_6$ ಸಹೋದರಿಗೆ ಬಾಕಿ ಉಳಿದುದರಲ್ಲಿ $^1/_3$.

5. ಮೃತನಿಗೆ ತಂದೆ ಅಥವಾ ಪುತ್ರನಿರುವಾಗ, ಸಹೋದರಿಗೆ ಪಾಲಿರಲಾರದು.

## ತಂದೆಯ ಮೂಲಕವಿರುವ ಸಹೋದರಿ(ಪಿತೃಜೆ)ಯರು

**ಅವರಿಗೆ ಏಳು ಸ್ಥಿತಿಗಳಿವೆ:**

1. ಕೇವಲ ಒಬ್ಬಳೇ ಇರುವಾಗ, ಮೃತನಿಗೆ ಮಕ್ಕಳು, ತಂದೆ, ಒಡಹುಟ್ಟಿದ ಸಹೋದರ ಸಹೋದರಿಯರಾರೂ ಇಲ್ಲದ ಸ್ಥಿತಿಯಲ್ಲಿ ಆಕೆಗೆ ಸೊತ್ತಿನ ಅರ್ಧಾಂಶ ದೊರೆಯುತ್ತದೆ.

2. ಅವರು ಒಂದಕ್ಕಿಂತ ಹೆಚ್ಚು ಮಂದಿಯಿರುವಾಗ ಅವರ ಹಕ್ಕಿಗೆ ಅಡ್ಡಿಯಾಗುವ ಮೇಲೆ ಹೇಳಿದ ಯಾರೂ ಇಲ್ಲದಿದ್ದರೆ $^2/_3$.

3. ಒಡ ಹುಟ್ಟಿದ ಸಹೋದರಿಯೂ ಇದ್ದರೆ $^1/_6$. ಆಕೆಗೆ ತಂದೆ ಒಂದೇ ಆಗಿರುವ ಸಹೋದರನೂ ಇದ್ದರೆ, ತಂದೆ ತಾಯಿ ಒಂದೇ ಆಗಿರುವ ಸಹೋದರಿಯ ಪಾಲು ಕಳೆದು ಬಾಕಿ ಉಳಿದ ಅರ್ಧವನ್ನು ಅವರೀರ್ವರೂ ಪುರುಷನಿಗೆ ಸ್ತ್ರೀಯ ಇಮ್ಮಡಿ ಎಂಬ ಪ್ರಮಾಣದಲ್ಲಿ ಹಂಚಿಕೊಳ್ಳಬೇಕು.

4. ಅವಳ ಸಮಾನ ಪದವಿಯಲ್ಲಿರುವ ಸಹೋದರ ಜತೆಯಲ್ಲಿರುವಾಗ, ಅರ್ಥಾತ್ ಮೃತನ ತಂದೆ ಒಂದೇ ಆಗಿರುವ ಸಹೋದರ. ಆಗ ಆಕೆಯು ಆತನಿಂದಾಗಿ ಅಸ್ವಬಃ ಆಗುತ್ತಾಳೆ. ಆದ್ದರಿಂದ ಕೇವಲ ಅವರಿಬ್ಬರಿದ್ದರೆ, ಒಟ್ಟು ಸೊತ್ತಿನಲ್ಲಿ ಪುರುಷನಿಗೆ ಸ್ತ್ರೀಯ ಇಮ್ಮಡಿ ಎಂಬ ಅನುಪಾತದಲ್ಲಿ ಅವರೀರ್ವರೂ ಹಂಚಿಕೊಳ್ಳಬೇಕು.

5. ಅವಳೊಂದಿಗೆ ಮೃತನ ಮಗಳು, ಮಗನ ಮಗಳು ಅಥವಾ ಅವರೀರ್ವರೂ ಇರುತ್ತಾ ತಂದೆ ತಾಯಿ ಒಂದೇ ಆಗಿರುವ ಸಹೋದರಿ, ಸಹೋದರ, ತಂದೆ ಒಂದೇ ಆಗಿರುವ ಸಹೋದರ ಮುಂತಾದ ಯಾರೂ ಇಲ್ಲದಿರುವುದು. ಈ ಸ್ಥಿತಿಯಲ್ಲಿ ಆಕೆಯು 'ಅಸ್ವಬಃ' ಆಗಿರುತ್ತಾಳೆ. ಅರ್ಥಾತ್- ಮಗಳ ಮತ್ತು ಮಗನ ಮಕ್ಕಳ ಪಾಲು ಕಳೆದು ಉಳಿದುದನ್ನು ಆಕೆ ಪಡೆಯುತ್ತಾಳೆ.

6. ಮೃತನಿಗೆ ಪುತ್ರ, ಪೌತ್ರ ಅಥವಾ ಪಿತ ಹಕ್ಕುದಾರರಾಗಿರುವಾಗ ಈ ಸಹೋದರರಿಗೆ ಹಕ್ಕಿಲ್ಲ.

7. ಮೃತನಿಗೆ ತಂದೆ ತಾಯಿಗಳು ಒಂದೇ ಆಗಿರುವ ಸಹೋದರಿಯರು ಅಥವಾ ಹೆಣ್ಣು ಮಕ್ಕಳೊಂದಿಗೆ 'ಅಸ್ವಬಃ' ಆಗಿ ಮಾರ್ಪಟ್ಟ ಓರ್ವ ಸಹೋದರಿಯು ಇರುವಾಗ ಈ ಸಹೋದರಿಗೆ ಹಕ್ಕಿಲ್ಲ.

## ಅಲ್ ಮುಶ್ತರಿಕಃ

ಓರ್ವ ಸ್ತ್ರೀಯು ಮರಣ ಹೊಂದುತ್ತಾಳೆ. ಪತಿ, ತಾಯಿ, ಮಾತೃಜ ಮತ್ತು ಭ್ರಾತೃಜರಾಗಿರುವ ಸಹೋದರರು ಹಕ್ಕುದಾರರಾಗಿದ್ದಾರೆ. ಅಂಥ ಸಂದರ್ಭಗಳಲ್ಲಿ ಪತಿಗೆ ಅರ್ಧ, ತಾಯಿಗೆ $^{1}/_{6}$ ತಾಯಿಯ ಮೂಲಕವಿರುವ ಸಹೋದರರಿಗೆ $^{1}/_{3}$. ಅಲ್ಲಿಗೆ ಸೊತ್ತು ಮುಗಿಯಿತು. ತಂದೆ ತಾಯಿಗಳು ಒಂದಾಗಿರುವ ಸಹೋದರರಿಗೆ ನಿಶ್ಚಿತ ಪಾಲು ಇಲ್ಲ. ಅವರು ಮಿಗತೆ ಹಣವನ್ನು ಪಡೆಯುವವರಾಗಿದ್ದಾರೆ(ಅಸ್ವಬಃ). ಅಲ್ಲಿ ಮಿಗತೆ ಇಲ್ಲ. ಆದ್ದರಿಂದ ಅವರಿಗೆ ಏನೂ ದೊರೆಯದಿರುವ ಸ್ಥಿತಿ ಬಂತು. ಆದರೆ, ಅವರೂ ಮೃತನ ತಾಯಿಯ ಮೂಲಕವಿರುವ ಸಹೋದರರೇ ಆಗಿದ್ದಾರೆ. ಆದ್ದರಿಂದ ಅವರನ್ನು ತಾಯಿಯ ಮೂಲಕವಿರುವ ಸಹೋದರರ ಜತೆಯಲ್ಲಿ ಸೇರಿಸಿ ಅವರಿಗೆ $^{1}/_{3}$ ಅಂಶದಲ್ಲಿ ಸಮಾನ ಪಾಲು ನೀಡಲಾಗುವುದು. ಹೀಗೆ ಅವರಿಗೂ $^{1}/_{3}$ ಪಾಲು ನೀಡುವುದರಿಂದ ಈ ಸಮಸ್ಯೆಗೆ, 'ಅಲ್ ಮಸ್‌ಅಲತುಲ್ ಮುಶ್ತರಿಕಃ', ಎಂದು ಹೇಳಲಾಗುತ್ತದೆ.

## ಅಸ್ವಬಃ

ನಿರ್ದಿಷ್ಟ ಪಾಲುದಾರರಿಲ್ಲದಿದ್ದರೆ ಮೃತನ ಸೊತ್ತನ್ನು ಸಮಗ್ರವಾಗಿಯೂ, ಪಾಲುದಾರರಿದ್ದರೆ ಅವರ ಪಾಲನ್ನು ಕಳೆದು ಮಿಗತೆಯಿರುವುದಕ್ಕೆ ಸಂಪೂರ್ಣವಾಗಿಯೂ ಹಕ್ಕುದಾರರಾಗಿರುವವರನ್ನು ಅಸ್ವಬಃ ಎನ್ನಲಾಗುತ್ತದೆ. ಮೃತನ ಜತೆಗಿರುವ ಕುಟುಂಬ ಸಂಬಂಧದಿಂದ ಅಸ್ವಬಃರಾದವರು, ಮೃತನ ಗುಲಾಮಗಿರಿಯಿಂದ ವಿಮೋಚಿಸುವುದರಿಂದ ಅಸ್ವಬಃರಾದವರು, ಹೀಗೆ ಅಸ್ವಬಃದಲ್ಲಿ ಎರಡು ವರ್ಗಗಳಿವೆ.

ಕುಟುಂಬ ಸಂಬಂಧದ ಮೂಲಕವಿರುವ 'ಅಸ್ವಬಃ' ಮೂರು ವಿಧವಿದ್ದಾರೆ-

**1. ಸ್ವತಃ ಅಸ್ವಬಃರಾದವರು:** ಇವರು ಸ್ತ್ರೀಯು ಮಧ್ಯವರ್ತಿಯಾಗಿರದ ರೀತಿಯಲ್ಲಿ ಮೃತನೊಂದಿಗೆ ಸಂಬಂಧವಿರುವ ಪುರುಷರು. ಮಧ್ಯವರ್ತಿಯಿಲ್ಲದೆ ಮೃತನೊಂದಿಗೆ ನೇರ ಸಂಬಂಧವಿರುವ ತಂದೆ, ಪುತ್ರ ಮುಂತಾದವರು ಮತ್ತು ಪುರುಷನ ಮೂಲಕ ಅವರೊಂದಿಗೆ ಸಂಬಂಧ ಹೊಂದುವ ಸಹೋದರ, ಪಿತಾಮಹ, ಪಿತೃ ಸಹೋದರ ಮುಂತಾದವರು ಅದರಲ್ಲಿ ಸೇರಿದ್ದಾರೆ. ಕೇವಲ ಸ್ತ್ರೀಯ ಮೂಲಕ ಮೃತನೊಡನೆ ಸಂಬಂಧವಿರುವವರು ಅಸ್ವಬಃದಲ್ಲಿ ಸೇರುವುದಿಲ್ಲ. ಉದಾ: ತಾಯಿ ಮಾತ್ರ ಒಂದೇ ಆಗಿರುವ ಸಹೋದರ. ಕೆಳಗೆ ಹೇಳಿದ 4 ವರ್ಗಗಳು ಸ್ವತಃ ಅಸ್ವಬಃಕ್ಕೆ ಸೇರಿದ್ದಾರೆ.

(i) ಪುತ್ರ, ಪುತ್ರನ ಪುತ್ರ, ಅವನ ಪುತ್ರ, ಹೀಗೆ ಕೆಳಗಿನ ತನಕ...

(ii) ಪಿತ, ಪಿತಾಮಹ ಹೀಗೆ ಮೇಲಕ್ಕೆ...

(iii) ಸಹೋದರರು, ತಂದೆ ಮತ್ತು ತಾಯಿ ಒಂದೇ ಆಗಿರುವ ಅಥವಾ ತಂದೆ ಮಾತ್ರ ಒಂದೇ ಆಗಿರುವ ಸಹೋದರ, ಅವರ ಗಂಡು ಮಕ್ಕಳು.

(iv) ಪಿತೃ ಸಹೋದರರು, ತಂದೆ ತಾಯಿ ಒಂದೇ ಆಗಿರುವ ಪಿತೃ ಸಹೋದರರು, ತಂದೆ ಒಂದೇ ಆಗಿರುವ ಪಿತೃ ಸಹೋದರರು, ಅವರ ಗಂಡು ಮಕ್ಕಳು.

ಈ ಪೈಕಿ ಮೊದಮೊದಲು ಹೇಳಿದವರಿಗೆ ಇತರರಿಗಿಂತ ಆದ್ಯತೆ ದೊರೆಯುತ್ತದೆ. ಆದ್ದರಿಂದ ಪುತ್ರ ಅಥವಾ ಪೌತ್ರನಿರುವಾಗ ತಂದೆಯು ಅಸ್ವಬಃ ಆಗುವುದಿಲ್ಲ.

ಪುತ್ರ ಅಥವಾ ತಂದೆಯಿದ್ದರೆ ಸಹೋದರನಿಗೆ ಹಕ್ಕಿಲ್ಲ. ಮೇಲೆ ಹೇಳಿದವರ ಪೈಕಿ ಯಾರಾದರೊಬ್ಬರಿದ್ದರೆ ಪಿತೃ ಸಹೋದರ ಹಕ್ಕುದಾರನಾಗುವುದಿಲ್ಲ.

**2. ಇತರರ ಕಾರಣದಿಂದ ಅಸ್ವಬಃರಾದವರು:** ಒಂಟಿಯಾಗಿರುವಾಗ ಅರ್ಧ ಮತ್ತು ಒಂದಕ್ಕಿಂತ ಹೆಚ್ಚು ಮಂದಿಯಿರುವಾಗ $^2/_3$ ಅಂಶ ದೊರೆಯುವ ಸ್ತ್ರೀಯರಾದ ನಾಲ್ವರು ಹಕ್ಕುದಾರರು ಪ್ರಸ್ತುತ ಅಸ್ವಬಃರಾಗಿದ್ದಾರೆ. ಅವರು ತಮ್ಮ ಸಹೋದರನ ಕಾರಣದಿಂದ ಅಸ್ವಬಃರಾಗಿ ಮಾರ್ಪಡುತ್ತಾರೆ. ಈ ಕೆಳಗಿನವರು ಅದರಲ್ಲಿ ಸೇರುತ್ತಾರೆ-

(i). ಮಗಳು: ಆಕೆಗೆ ಸಹೋದರನಿದ್ದರೆ ಆತನಿಂದಾಗಿ ಆಕೆಯು ಅಸ್ವಬಃಳಾಗುತ್ತಾಳೆ. ಅರ್ಥಾತ್, ಒಟ್ಟು ಸೊತ್ತಿನ ಅರ್ಧಾಂಶದ ಬದಲಾಗಿ ಆತನಿಗೆ ದೊರೆಯುವುದರ ಅರ್ಧಾಂಶ ಮಾತ್ರ ದೊರೆಯುವುದು.

(ii) ಮಗನ ಮಗಳು: ಆಕೆಗೆ ಸಹೋದರ, ಸಹೋದರನ ಮಗ ಅಥವಾ ಆಕೆಯ ಪಿತೃಸಹೋದರನ ಪುತ್ರನಿದ್ದರೆ ಅವನಿಂದಾಗಿ ಆಕೆಯು ಅಸ್ವಬಃಳಾಗುತ್ತಾಳೆ. ಅರ್ಥಾತ್ ಗಂಡಿನ ಪಾಲಿನ ಅರ್ಧಾಂಶ ಮಾತ್ರ ಆಕೆಗೆ ದೊರೆಯುತ್ತದೆ. ಮೃತ ಪಿತಾಮಹನಿಗೆ ಒಂದಕ್ಕಿಂತ ಹೆಚ್ಚು ಹೆಣ್ಮಕ್ಕಳು ಬದುಕಿದ್ದರೆ ಒಟ್ಟು ಸೊತ್ತಿನ $^2/_3$ ಪಾಲು ಅವರಿಗೆ ಕೊಡಬೇಕಾಗುತ್ತದೆ. ಆಗ ಎಲ್ಲ ಹೆಣ್ಮಕ್ಕಳಿಗೂ ಒಟ್ಟಿಗೆಯಿರುವ $^1/_3$ ಅಂಶದ ಹಕ್ಕು ಮುಗಿದು ಹೋಗುವುದರಿಂದ ಮಗನ ಮಗಳಿಗೆ ಏನೂ ಉಳಿಯುವುದಿಲ್ಲ. ಆದರೆ ಈ ಹಂತದಲ್ಲಿ ಮೃತನಿಗೆ ಮಗನ ಮಗ ಅಥವಾ ಆತನ ಮಗ (ಮಗನ ಮಗಳ ಸಹೋದರ ಪುತ್ರ)ನಿದ್ದರೆ

ಆತನು ಆಕೆಯ ಅಸ್ವಬಃನಾಗುತ್ತಾನೆ. ಆತನಿಗೆ ದೊರೆಯುವುದರ ಅರ್ಧಾಂಶವು ಆಕೆಗೂ ದೊರೆಯುವುದು.

(iii) ತಂದೆ ತಾಯಿಗಳು ಒಂದೇ ಆಗಿರುವ ಸಹೋದರಿಯನ್ನು ಆಕೆಯ ಪೂರ್ಣ ಸಹೋದರನು ಅಸ್ವಬಃ ಗೊಳಿಸುತ್ತಾನೆ. ಆದರೆ ತಂದೆಯು ಒಂದೇ ಆಗಿರುವ ಸಹೋದರನು ಜತೆಗಿದ್ದರೆ ಪೂರ್ಣ ಸಹೋದರಿಯು ಆಂಶಿಕ ಹಕ್ಕುದಾರಳಾಗಿರುತ್ತಾಳೆ.

(iv) ತಂದೆ ಒಂದೇ ಆಗಿರುವ ಸಹೋದರಿಯನ್ನು ಅದೇ ಶ್ರೇಣಿಯಲ್ಲಿರುವ ಸಹೋದರನು ಅಸ್ವಬಃಗೊಳಿಸುತ್ತಾನೆ.

3. **ಇತರರೊಂದಿಗೆ ಅಸ್ವಬಃರಾದವರು:** ಸಹೋದರಿಯರು ಮೃತನ ಹೆಣ್ಣು ಮಕ್ಕಳ ಜತೆ ಸೇರಿದಾಗ ಇದು ಸಂಭವಿಸುತ್ತದೆ.

ಮಗಳ ಅಥವಾ ಮಗನ ಮಗಳ ಜತೆ ಮೃತನ ಸಹೋದರಿ ಅಥವಾ ಸಹೋದರಿಯರು ಇದ್ದರೆ, ಅಸ್ವಬಃ ಎಂಬ ನೆಲೆಯಲ್ಲಿ ಮಗಳ ಅರ್ಧ ಪಾಲು ಕಳೆದು ಉಳಿದುದನ್ನು ಇತರ ಪಾಲುದಾರರು ಯಾರೂ ಇಲ್ಲದಿದ್ದರೆ ಸಹೋದರಿ ಪಡೆಯುವಳು. ಇತರ ಪಾಲುದಾರರಿದ್ದರೆ ಅವರ ಪಾಲು ಕಳೆದು ಮಿಗತೆಯಿರುವುದನ್ನು ತೆಗೆಯಬೇಕು.

## ಎರಡು ಕಡೆಯಿಂದ ಹಕ್ಕು ದೊರೆಯುವವರು

ಈ ಮಂದಿ ಎರಡು ಕಾರಣದಿಂದ ದಾಯಧನದಲ್ಲಿ ಪಾಲು ಪಡೆಯಲು ಅರ್ಹರಾಗಿದ್ದಾರೆ. ಪತಿಯು ಪತ್ನಿಯ ಪಿತೃ ಸಹೋದರನ ಪುತ್ರನಾಗುವುದು ಉದಾಹರಣೆಯಾಗಿದೆ. ಪತಿ ಎಂಬ ನೆಲೆಯಲ್ಲಿಯೂ ಪಿತೃ ಸಹೋದರನ ಮಗನೆಂಬ ನೆಲೆಯಲ್ಲಿಯೂ ಅವರಿಗೆ ಪಾಲು ದೊರೆಯಬಹುದು. ಪಿತೃ ಸಹೋದರನ ಪುತ್ರನು ತಾಯಿ ಒಂದೇ ಆಗಿರುವ ಸಹೋದರನೂ ಆಗಿರುವುದು ಇನ್ನೊಂದು ಉದಾಹರಣೆಯಾಗಿದೆ. ಆತನಿಗೆ ಈ ಎರಡು ರೀತಿಯಿಂದಲೂ ಪಾಲು ದೊರೆಯಬಹುದು.

## ಗುಲಾಮ ವಿಮೋಚನೆ(ಜೀತ ಮುಕ್ತಿ)ಯಿಂದ ಅಸ್ವಬಃರಾಗುವವರು

ಗುಲಾಮನನ್ನು ವಿಮೋಚನೆಗೊಳಿಸಿದ ಮಾಲಿಕನೂ ಆತನಿಲ್ಲದಿದ್ದರೆ ಆತನ ಅಸ್ವಬಃರಾದ ಹಕ್ಕುದಾರರು ಪ್ರಸ್ತುತ ಅಸ್ವಬಃರಾಗಿದ್ದಾರೆ. ಗುಲಾಮನನ್ನು ವಿಮೋಚನೆಗೊಳಿಸಿದ ವ್ಯಕ್ತಿಯು ಗಂಡಾದರೂ ಹೆಣ್ಣಾದರೂ ಅಸ್ವಬಃರಾಗಿದ್ದಾರೆ. ಈ ವರ್ಗಕ್ಕೆ ಸೇರಿದ ವ್ಯಕ್ತಿ ಮಾತ್ರ ಸ್ವಯಂ ಅಸ್ವಬಃಳಾಗುವ ಸ್ತ್ರೀ. ಗುಲಾಮನನ್ನು ಸ್ವತಂತ್ರಗೊಳಿಸಿದ ಬಳಿಕ ಗುಲಾಮ ಮತ್ತು ಮಾಲಕರಲ್ಲಿ ಉಳಿಯುವ ಪರಸ್ಪರ ಕಾನೂನುಬದ್ಧ ಸಂಬಂಧಕ್ಕೆ 'ವಲಾಅ್' ಎಂದು ಹೇಳುತ್ತಾರೆ. ವಿಮೋಚಿತ ಗುಲಾಮನಿಗೆ ಸಂಬಂಧಿಕಳಾದ ಹಕ್ಕುದಾರ ರಿಲ್ಲದಿದ್ದರೆ ಆತನ ಸೊತ್ತು ಸಂಪೂರ್ಣವಾಗಿ ಯಜಮಾನನಿಗೂ, ಆತನಿಲ್ಲದಿದ್ದರೆ ಆತನ ಅಸ್ವಬಃರಾದ ಹಕ್ಕುದಾರರಿಗೂ ದೊರೆಯುವುದು. ಸಂಬಂಧಿಕರಾದ ಹಕ್ಕುದಾರರಿದ್ದರೆ ಅವರ ಹಕ್ಕು 'ಕಳೆದು' ಮಿಗತೆಯಿರುವುದು ಯಜಮಾನನಿಗೆ ಅಥವಾ ಹಕ್ಕುದಾರರಿಗೆ ದೊರೆಯುತ್ತದೆ.

## ಹಜ್ಬ್

'ಹಜ್ಬ್' ಎಂದರೆ ಒಬ್ಬನ ಸಾನ್ನಿಧ್ಯವು ಇನ್ನೊಬ್ಬನ ಹಕ್ಕು ಪಡೆಯಲು ಅಡ್ಡಿಯಾಗುವುದಾಗಿದೆ. ಹಜ್ಬ್ ಎರಡು ವಿಧವಿದೆ-

1. ಪಾಲಿನಲ್ಲಿ ಕಡಿತಗೊಳಿಸುವುದು.
2. ಹಕ್ಕನ್ನು ಸಂಪೂರ್ಣವಾಗಿ ನಿಷೇಧಿಸುವುದು.

ಪಾಲಿನಲ್ಲಿ ಕಡಿತಗೊಳಿಸುವ 'ಹಜ್ಬ್'ಗೆ ಐದು ವರ್ಗದವರು ಬದ್ಧರಾಗುತ್ತಾರೆ.

1. **ತಾಯಿ:** ಮೃತನಿಗೆ ಸಂತಾನ ಅಥವಾ ಒಂದಕ್ಕಿಂತ ಹೆಚ್ಚು ಸಹೋದರರಿದ್ದರೆ ತಾಯಿಗೆ $^1/_3$ರ ಬದಲಾಗಿ ಪಾಲು $^1/_6$ಕ್ಕೆ ಇಳಿಯುತ್ತದೆ.

2. **ಮಗನ ಮಗಳು:** ಮೃತನಿಗೆ ಒಬ್ಬಳು ಮಗಳಿದ್ದರೆ ಮಗನ ಮಗಳ ಪಾಲು ಅರ್ಧದಿಂದ $^1/_6$ಕ್ಕೆ ಇಳಿಯುತ್ತದೆ.

3. **ತಂದೆ ಒಂದೇ ಆಗಿರುವ ಸಹೋದರಿ:** ತಂದೆ ತಾಯಂದಿರು ಒಂದೇ ಆಗಿರುವ ಓರ್ವ ಸಹೋದರಿಯಿದ್ದರೆ ತಂದೆ ಒಂದೇ ಆಗಿರುವ ಸಹೋದರಿಯ ಪಾಲು ಅರ್ಧದಿಂದ $^1/_6$ಕ್ಕೆ ಇಳಿಯುತ್ತದೆ.

4. **ಪತಿ:** ಮೃತ ಪತ್ನಿಗೆ ಸಂತಾನವಿದ್ದರೆ ಪತಿಯ ಪಾಲು ಅರ್ಧದಿಂದ $^1/_4$ಕ್ಕೆ ಇಳಿಯುತ್ತದೆ.

5. **ಪತ್ನಿ:** ಮೃತ ಪತಿಗೆ ಸಂತಾನವಿದ್ದರೆ ಪತ್ನಿಯ ಪಾಲು $^1/_4$ರಿಂದ $^1/_8$ಕ್ಕೆ ಇಳಿಯುತ್ತದೆ.

## ಹಕ್ಕು ಸಂಪೂರ್ಣವಾಗಿ ನಿಷೇಧಿಸಲ್ಪಡುವವರು

ತಂದೆ, ತಾಯಿ, ಮಗ, ಮಗಳು, ಪತ್ನಿ, ಪತಿ ಎಂಬೀ ಆರು ಮಂದಿಗೆ ಹಕ್ಕು ನಿಷೇಧಿಸಲ್ಪಡುವ ಸ್ಥಿತಿಯೇ ಬರುವುದಿಲ್ಲ. ಇತರರಿಗೆ ಕೆಲವೊಮ್ಮೆ ಹಕ್ಕುಗಳು ದೊರೆಯಬಹುದು, ಕೆಲವೊಮ್ಮೆ ಸಂಪೂರ್ಣ ನಿಷೇಧಿಸಲ್ಪಡಬಹುದು. ಹಕ್ಕು ನಿಷೇಧಕ್ಕೆ ಆಧಾರವಾಗಿರುವ ಎರಡು ಶರ್ತಗಳನ್ನು ಕರ್ಮಶಾಸ್ತ್ರಜ್ಞರು ಸೂಚಿಸಿದ್ದಾರೆ-

(i) ಹಕ್ಕುದಾರನು ಮೃತನೊಂದಿಗೆ ಬೇರೊಬ್ಬ ವ್ಯಕ್ತಿಯ ಮೂಲಕ ಸಂಬಂಧ ಹೊಂದಿದ್ದರೆ ಆ ವ್ಯಕ್ತಿಯು ಬದುಕಿರುವಾಗ ಆತನಿಗೆ ಹಕ್ಕು ದೊರೆಯುವುದಿಲ್ಲ. ಉದಾ: ಮಗ, ಮಗನ ಮಗ, ತಾಯಿ, ತಾಯಿಯ ತಾಯಿ, ತಂದೆ, ತಂದೆಯ ತಂದೆ. ಮಗನ ಮಗನು, ಮಗನ ಮೂಲಕ ಮೃತನೊಂದಿಗೆ ಸಂಬಂಧ ಹೊಂದಿದ್ದಾನೆ. ಆದ್ದರಿಂದ ಮಗನಿರುವಾಗ, ಮಗನ ಮಗನಿಗೆ ಹಕ್ಕಿಲ್ಲ. ತಾಯಿ ಮತ್ತು ತಾಯಿಯ ತಾಯಿಯೂ ತಂದೆ ಮತ್ತು ತಂದೆಯ ತಂದೆಯೂ ಅಷ್ಟೇ. ಆದರೆ ತಾಯಿಯಿರುವಾಗಲೇ ತಾಯಿಯ ಮೂಲಕವಿರುವ ಸಹೋದರ ಸಹೋದರಿಯರು ಹಕ್ಕು ಪಡೆಯುವರು. ಇದು ಸಾಮಾನ್ಯ ನಿಯಮಕ್ಕೆ ಹೊರತಾಗಿದೆ.

(ii) ಹತ್ತಿರದ ಸಂಬಂಧಿಕರು ಬದುಕಿರುವಾಗ ದೂರದವರಿಗೆ ಹಕ್ಕು ದೊರೆಯಲಾರದು. ಉದಾ: ಪುತ್ರನು ಬದುಕಿರುವಾಗ ಅನಾಥ ಪೌತ್ರನಿಗೂ ಸಹೋದರನಿರುವಾಗ ಪಿತೃ ಸಹೋದರನಿಗೂ ಹಕ್ಕು ಲಭಿಸದಿರುವುದು. ಈ ಶರ್ತಗಳ ಆಧಾರದಲ್ಲಿ ಹಕ್ಕು ಸಂಪೂರ್ಣ ನಿಷೇಧಿಸಲ್ಪಡುವ ಪುರುಷರು 13 ವರ್ಗವಿದ್ದಾರೆ-

1. **ಮಗನ ಮಗ:** ಮಗನು ಬದುಕಿರುವಾಗ ಮಗನ ಮಗನಿಗೆ ಹಕ್ಕಿರಲಾರದು.

2. **ಮಗನ ಮಗನ ಉತ್ತರಾಧಿಕಾರಿಗಳು:** ಮಗನ ಮಗನು ಬದುಕಿರುವಾಗ, ಆತನ ಉತ್ತರಾಧಿಕಾರಿಗಳಿಗೆ ಹಕ್ಕು ದೊರೆಯುವುದಿಲ್ಲ.

3. **ಪಿತಾಮಹ:** ಪಿತನು ಬದುಕಿರುವಾಗ ಪಿತಾಮಹನಿಗೆ ಹಕ್ಕಿಲ್ಲ.

4. **ಮಾತಾಪಿತರು ಒಂದೇ ಆಗಿರುವ ಸಹೋದರ:** ತಂದೆ, ಮಗ, ಮಗನ ಮಗ ಮುಂತಾದ ಉತ್ತರಾಧಿಕಾರಿಗಳು ಬದುಕಿರುವಾಗ ಮಾತಾಪಿತರು ಒಂದೇ ಆಗಿರುವ ಸಹೋದರನಿಗೆ ಹಕ್ಕಿಲ್ಲ.

5. **ತಂದೆ ಒಂದೇ ಆಗಿರುವ ಸಹೋದರ:** ತಂದೆ, ಮಗ, ಮಗನ ಮಗ, ಮಾತಾಪಿತರು ಒಂದೇ ಆಗಿರುವ ಸಹೋದರ ಬದುಕಿರುವಾಗ ತಂದೆ ಒಂದೇ ಆಗಿರುವ ಸಹೋದರನಿಗೆ ಹಕ್ಕಿಲ್ಲ. ಇತರರೊಂದಿಗೆ ಅಸ್ಬಬಃರಾಗಿ ಬಿಟ್ಟ ಮಾತಾಪಿತರು ಒಂದೇ ಆಗಿರುವ ಸಹೋದರಿ ಜೀವಂತವಿದ್ದರೂ ತಂದೆ ಒಂದೇ ಆಗಿರುವ ಸಹೋದರನಿಗೆ ಹಕ್ಕಿಲ್ಲ.

6. **ಮಾತಾಪಿತರು ಒಂದೇ ಆಗಿರುವ ಸಹೋದರ ಪುತ್ರ:** ತಂದೆ, ಮಗ, ಮಗನ ಮಗ, ಮಾತಾಪಿತರು ಒಂದೇ ಆಗಿರುವ ಸಹೋದರ, ಇತರರೊಂದಿಗೆ ಅಸ್ಬಬಃವಾದ ತಂದೆ ತಾಯಿಗಳು ಒಂದೇ ಆಗಿರುವ ಸಹೋದರಿ, ತಂದೆ ಒಂದೇ ಆಗಿರುವ ಸಹೋದರ ಎಂಬಿವರು ಬದುಕಿದ್ದರೆ ಮಾತಾಪಿತರು ಒಂದೇ ಆಗಿರುವ ಸಹೋದರ ಪುತ್ರನಿಗೆ ಹಕ್ಕಿಲ್ಲ. ತಂದೆ ಒಂದೇ ಆಗಿರುವ ಸಹೋದರಿ ಇತರರೊಂದಿಗೆ ಅಸ್ಬಬಃಳಾದಾಗ ಇದೇ ನಿಯಮ ಅನ್ವಯವಾಗುತ್ತದೆ.

7. **ಪಿತ ಒಂದೇ ಆಗಿರುವ ಸಹೋದರ ಪುತ್ರ:** ಒಂದರಿಂದ ಆರರ ವರೆಗಿನ ಕ್ರಮ ಸಂಖ್ಯೆಗಳಲ್ಲಿ ಸೂಚಿಸಿದ ಎಂಟು ಮಂದಿಯಲ್ಲಿ ಯಾರಾದರೂ ಬದುಕಿದ್ದರೆ ಪಿತನು ಒಂದೇ ಆಗಿರುವ ಸಹೋದರ ಪುತ್ರನಿಗೆ ಹಕ್ಕಿಲ್ಲ.

8. **ಮಾತಾಪಿತರು ಒಂದೇ ಆಗಿರುವ ಪಿತೃ ಸಹೋದರ:** ಒಂದರಿಂದ ಏಳರ ವರೆಗಿನ ಕ್ರಮಸಂಖ್ಯೆಗಳಲ್ಲಿ ಸೂಚಿಸಿದ 9 ವರ್ಗಗಳಲ್ಲಿ ಯಾರಾದರೂ ಬದುಕಿದ್ದರೆ ಮಾತಾಪಿತರು ಒಂದೇ ಆಗಿರುವ ಪಿತೃ ಸಹೋದರನಿಗೆ ಹಕ್ಕಿರುವುದಿಲ್ಲ.

9. **ಪಿತ ಒಂದೇ ಆಗಿರುವ ಪಿತೃ ಸಹೋದರ:** 1ರಿಂದ 8ರ ವರೆಗಿನ ಕ್ರಮ ಸಂಖ್ಯೆಗಳಲ್ಲಿ ಸೂಚಿಸಲಾದ 10 ವರ್ಗಗಳಲ್ಲಿ ಯಾರಾದರೂ ಬದುಕಿದ್ದರೆ ಪಿತ ಒಂದೇ ಆಗಿರುವ ಪಿತೃ ಸಹೋದರನಿಗೆ ಹಕ್ಕಿರುವುದಿಲ್ಲ.

10. **ತಂದೆ ತಾಯಿಗಳು ಒಂದೇ ಆಗಿರುವ ಪಿತೃ ಸಹೋದರ ಪುತ್ರ:** 1ರಿಂದ 9ರ ವರೆಗಿನ ಕ್ರಮಸಂಖ್ಯೆಗಳಲ್ಲಿ ಸೂಚಿಸಿದ 11 ವರ್ಗಗಳಲ್ಲಿ ಯಾರಾದರೂ ಬದುಕಿದ್ದರೆ ಮಾತಾಪಿತರು ಒಂದೇ ಆಗಿರುವ ಪಿತೃ ಸಹೋದರ ಪುತ್ರನಿಗೆ ಹಕ್ಕಿರುವುದಿಲ್ಲ.

11. **ಪಿತ ಒಂದೇ ಆಗಿರುವ ಪಿತೃ ಸಹೋದರ ಪುತ್ರ:** 1ರಿಂದ 10ರ ವರೆಗಿನ ಕ್ರಮಸಂಖ್ಯೆಗಳಲ್ಲಿ ಸೂಚಿಸಿದ 12 ವರ್ಗಗಳ ಪೈಕಿ ಯಾರಾದರೂ ಬದುಕಿದ್ದರೆ ಪಿತ ಒಂದೇ ಆಗಿರುವ ಪಿತೃ ಸಹೋದರ ಪುತ್ರನಿಗೆ ಹಕ್ಕಿರುವುದಿಲ್ಲ.

12. **ತಾಯಿ ಒಂದೇ ಆಗಿರುವ ಸಹೋದರ ಸಹೋದರಿಯರು:** ಪಿತೃ ಪಿತಾಮಹ, ಮಗ, ಮಗಳು, ಮಗನ ಮಗ ಎಂಬಿವರಲ್ಲಿ ಯಾರಾದರೂ ಬದುಕಿದ್ದರೆ, ತಾಯಿ ಒಂದೇ ಆಗಿರುವ ಸಹೋದರ ಸಹೋದರಿಯರಿಗೆ ಹಕ್ಕಿರುವುದಿಲ್ಲ.

13. **ಗುಲಾಮ ವಿಮೋಚನೆಗೊಳಿಸಿದ ಮಾಲಿಕ:** 1ರಿಂದ 11ರ ವರೆಗಿನ ಕ್ರಮ ಸಂಖ್ಯೆ ಹೇಳಿದ 13 ವರ್ಗಗಳ ಪೈಕಿ ಯಾರಾದರೂ ಬದುಕಿದ್ದರೆ ಗುಲಾಮನನ್ನು ವಿಮೋಚನೆ ಗೊಳಿಸಿದ ಮಾಲಿಕನಿಗೆ ದಾಯಧನದಲ್ಲಿ ಹಕ್ಕಿರುವುದಿಲ್ಲ.

**ಸ್ತ್ರೀಯರಲ್ಲಿ ಹಕ್ಕು ನಿಷೇಧಿಸಲ್ಪಟ್ಟ 9 ವರ್ಗದವರಿದ್ದಾರೆ:**

1. ಮಗನ ಮಗಳು: ಮಗ ಮತ್ತು ಆಕೆಯನ್ನು ಅಸ್ವಬಃ ಗೊಳಿಸುವ ಸಹೋದರ ಅಥವಾ ಸಹೋದರ ಪುತ್ರನಿಲ್ಲದ ಹಂತದಲ್ಲಿ ಒಂದಕ್ಕಿಂತ ಹೆಚ್ಚು ಹೆಣ್ಮಕ್ಕಳು ಆಕೆಯ ಹಕ್ಕನ್ನು ತಡೆಯುತ್ತಾರೆ.

2. ತಾಯಿಯ ತಾಯಿಯ ಹಕ್ಕನ್ನು ತಾಯಿ ತಡೆಯುತ್ತಾಳೆ.

3. ತಂದೆಯ ತಂದೆಯ ಹಕ್ಕನ್ನು ತಂದೆಯೂ ತಾಯಿಯೂ ತಡೆಯುತ್ತಾರೆ.

4. ತಾಯಿ ತಂದೆ ಒಂದೇ ಆಗಿರುವ ಸಹೋದರಿಯ ಹಕ್ಕನ್ನು ಮಗ, ಮಗನ ಮಗ, ತಂದೆ ಎಂಬಿವರು ತಡೆಯುತ್ತಾರೆ.

5. ತಂದೆ ಒಂದೇ ಆಗಿರುವ ಸಹೋದರಿಯ ಹಕ್ಕನ್ನು ಮಗ, ಮಗನ ಮಗ, ತಂದೆ, ಮಾತಾಪಿತರು ಒಂದೇ ಆಗಿರುವ ಸಹೋದರ, ಇತರರೊಂದಿಗೆ ಅಸ್ವಬಃಳಾದ ಸ್ವಂತ ಸಹೋದರಿ, ಅಸ್ವಬಃಗೊಳಿಸುವ ಸಹೋದರನಿಲ್ಲದ ಹಂತದಲ್ಲಿ ಒಂದಕ್ಕಿಂತ ಅಧಿಕ ಸ್ವಂತ ಸಹೋದರಿಯರು ಮುಂತಾದವರು ತಡೆಯುತ್ತಾರೆ.

6. ಗುಲಾಮನನ್ನು ವಿಮೋಚನೆಗೊಳಿಸಿದ ಸ್ತ್ರೀ(ಮುಅ್‌ತಿಕಃ)ಯ ಹಕ್ಕನ್ನು ಪುರುಷ ನಾಗಿರುವ ಸ್ವತಂತ್ರ ದಾಯಕ (ಮುಅ್‌ತಿಕ್)ನನ್ನು ತಡೆಯುವವರೆಲ್ಲರೂ ತಡೆಯುತ್ತಾರೆ.

7. ನಿರ್ದಿಷ್ಟ ಪಾಲುದಾರರು ಪಾಲು ಪಡೆದ ಬಳಿಕ ಧನ ಮಿಗತೆಯಿಲ್ಲದಿದ್ದರೆ ಆ ಮೂಲಕ ಅಸ್ವಬಃಗಳು ತಡೆಯಲ್ಪಡುತ್ತಾರೆ.

8. ಹತ್ತಿರದ ಮಾತಾಮಹಿಯು ದೂರದ ಮಾತಾಮಹಿಯ ಮತ್ತು ಪಿತಾಮಹನ ಹಕ್ಕುಗಳನ್ನು ತಡೆಯುತ್ತಾರೆ:

9. ಹತ್ತಿರದ ಪಿತಾಮಹನು ದೂರದ ಪಿತಾಮಹನ ಹಕ್ಕನ್ನೂ ತಡೆಯುತ್ತಾರೆ. ಆದರೆ ಅವರು ದೂರದ ಮಾತಾಮಹಿಯ ಹಕ್ಕನ್ನು ತಡೆಯುವುದಿಲ್ಲ.

ಉದಾಹರಣೆಗಳು:

1. ಮೃತನಿಗೆ ಹಕ್ಕುದಾರರಾಗಿ ಪತ್ನಿ, ತಾಯಿ, ಪಿತಾಮಹ, ಪಿತ, ಈರ್ವರು ಸಹೋದರರು ಮುಂತಾದವರಿದ್ದರೆ ಪತ್ನಿಗೆ $^1/_4$ ಮತ್ತು ತಾಯಿಗೆ $^1/_6$ ಭಾಗದ ಹಕ್ಕು ದೊರೆಯ ಬೇಕು. ಸಹೋದರರಿರುವುದರಿಂದ ತಾಯಿಯ $^1/_3$ ಭಾಗದ ಹಕ್ಕು $^1/_6$ಕ್ಕೆ ಇಳಿಯಿತು. ಪಿತನು ಬದುಕಿರುವುದರಿಂದ ಪಿತಾಮಹನಿಗೆ ಮತ್ತು ಸಹೋದರನಿಗೆ ಹಕ್ಕು ದೊರೆಯಲಿಲ್ಲ. ಪತ್ನಿ ಮತ್ತು ತಾಯಿಗೆ ಒಟ್ಟು ದೊರೆತದ್ದು $^5/_{12}$ ಭಾಗ ($^1/_4$+$^1/_6$). ಉಳಿದ $^7/_{12}$ ಅಸ್ವಬಃ ಎಂಬ ನೆಲೆಯಲ್ಲಿ ತಂದೆಯ ಪಾಲಾಗುತ್ತದೆ.

2. ಮಗಳು, ತಂದೆ ಒಂದೇ ಆಗಿರುವ ಸಹೋದರ ಪುತ್ರ, ಮಾತಾಪಿತರು ಒಂದೇ ಆಗಿರುವ ಪಿತೃಸಹೋದರ ಎಂಬಿವರು ಹಕ್ಕುದಾರರಾಗಿದ್ದರೆ ಮಗಳಿಗೆ $^1/_2$ ಭಾಗ ದೊರೆಯುವುದು. ಉಳಿದ $^1/_2$ ಸಹೋದರ ಪುತ್ರನಿಗೂ ದೊರೆಯುವುದು. ಪಿತೃ ಸಹೋದರನ ಹಕ್ಕನ್ನು ಸಹೋದರ ಪುತ್ರನ ಸಾನ್ನಿಧ್ಯವು ತಡೆಯುತ್ತದೆ. ಆತನಿಗೆ ಏನೂ ದೊರೆಯುವುದಿಲ್ಲ.

3. ಪತಿ, ಮಗನ ಮಗಳು, ಮಗನ ಮಗನ ಮಗ, ತಂದೆ, ತಂದೆ ಒಂದೇ ಆಗಿರುವ ಸಹೋದರ ಪುತ್ರ ಎಂಬಿವರು ಹಕ್ಕುದಾರರಾಗಿದ್ದರೆ ಪತಿಗೆ $^1/_4$ ಭಾಗ, ಮಗನ ಮಗಳಿಗೆ $^1/_2$ ಭಾಗ, ತಂದೆಗೆ $^1/_6$ ಭಾಗ ದೊರೆಯುತ್ತದೆ. ಉಳಿದದ್ದು ಮಗನ ಮಗನ ಮಗನಿಗಾಗಿದೆ. ಸಹೋದರ ಪುತ್ರನಿಗೆ ಏನೂ ದೊರೆಯುವುದಿಲ್ಲ. ಪತಿ, ಮಗನ ಮಗಳು, ತಂದೆ ಎಂಬಿವರಲ್ಲಿ ಎಲ್ಲರಿಗೂ ಒಟ್ಟು $^{11}/_{12}$ ($^1/_4$+$^1/_2$+$^1/_6$) ಭಾಗ ದೊರೆಯುತ್ತದೆ. ಉಳಿದ $^1/_{12}$ ಭಾಗವು ಮಗನ ಮಗನ ಮಗನಿಗೂ ದೊರೆಯುವುದು.

## ಅನಾಥ ಪೌತ್ರನ ಹಕ್ಕು

ಈ ವರೆಗೆ ವಿವರಿಸಿದ ವಾಸ್ತವಿಕತೆಗಳಿಂದ ಕೆಳಗಿನ ಸಾಮಾನ್ಯ ತತ್ವಗಳನ್ನು ಕ್ರೋಡೀಕರಿಸಬಹುದು.

1. ಇಸ್ಲಾಮಿನಲ್ಲಿ ವಾರೀಸು ಹಕ್ಕು ಇದೆ. ಆದ್ದರಿಂದ ಓರ್ವ ವ್ಯಕ್ತಿಯ ಜೀವನ ಕಾಲದಲ್ಲಿ ಆತನ ಸೊತ್ತಿನಲ್ಲಿ ಇತರ ಯಾರಿಗೂ ಹಕ್ಕಿಲ್ಲ.

2. ಮರಣ ಹೊಂದಿದಾಗ ಬದುಕಿರುವ ಉತ್ತರಾಧಿಕಾರಿಗಳಿಗೆ ಮಾತ್ರ ದಾಯಧನದ ಹಕ್ಕಿರುವುದು.

3. ಓರ್ವ ವ್ಯಕ್ತಿಯು ಬದುಕಿರುವಾಗ ಮೃತರಾದ ಉತ್ತರಾಧಿಕಾರಿಗಳಿಗೆ ಆತನ ವಾರೀಸು ಸೊತ್ತಿನಲ್ಲಿ ಹಕ್ಕಿರಲಾರದು. ವಾರೀಸು ಸೊತ್ತು ಆಗುವುದಕ್ಕಿಂತ ಮೊದಲು ಅವರು ಮೃತರಾಗಿರುವರೆಂಬುದೇ ಕಾರಣ.

4. ಮೃತ ವ್ಯಕ್ತಿಗೆ ಹತ್ತಿರದ ಸಂಬಂಧಿಕರಿರುವ ಸ್ಥಿತಿಯಲ್ಲಿ ಅದೇ ಕುಟುಂಬ ವೃಕ್ಷದ ದೂರದ ಸಂಬಂಧಿಕರಿಗೆ ಉತ್ತರಾಧಿಕಾರದ ಹಕ್ಕು ದೊರೆಯುವುದಿಲ್ಲ.

5. ದಾಯಧನ ವಿತರಣೆಯಲ್ಲಿ ವಾರೀಸುದಾರನ ಆರ್ಥಿಕ ಸ್ಥಿತಿಯ ಬದಲಾಗಿ ಮೃತನೊಂದಿಗಿನ ಸಂಬಂಧವನ್ನು ಪರಿಗಣಿಸಲಾಗುತ್ತದೆ.

6. ಮಾತಾಪಿತರು, ಪತಿ- ಪತ್ನಿಯರು ಮತ್ತು ಪುತ್ರ-ಪುತ್ರಿಯರು ಓರ್ವ ವ್ಯಕ್ತಿಯ ಹತ್ತಿರದ ಸಂಬಂಧಿಕರಾಗಿದ್ದು, ಅವರು ಬದುಕಿದ್ದರೆ ಇತರರು ಹಕ್ಕುದಾರರಾಗುವುದಿಲ್ಲ.

7. ತಂದೆಯಿರುವಾಗ ತಂದೆಯ ತಂದೆಯೂ ತಾಯಿಯಿರುವಾಗ ತಾಯಿಯ ತಾಯಿಯೂ ಪಿತಾಮಹಿ ಮತ್ತು ಪುತ್ರನಿರುವಾಗ ಪೌತ್ರನೂ ದಾಯಧನದ ಹಕ್ಕುದಾರ ರಾಗುವುದಿಲ್ಲ.

8. ತಂದೆಯಿಲ್ಲದಿರುವಾಗ ಪಿತಾಮಹನಿಗೂ ಪುತ್ರನಿಲ್ಲದಿರುವಾಗ ಪೌತ್ರನಿಗೂ, ಪಿತನ ಮತ್ತು ಪುತ್ರನ ಪ್ರತಿನಿಧಿಯೆಂಬ ನೆಲೆಯಲ್ಲಿ ಉತ್ತರಾಧಿಕಾರದ ಹಕ್ಕು ದೊರೆಯುವುದಿಲ್ಲ. ಬದಲಾಗಿ, ಅತ್ಯಂತ ನಿಕಟ ಸಂಬಂಧಿಕರಿಲ್ಲದಿರುವಾಗ ಆ ಹಕ್ಕು ಸಮೀಪದ ಬಂಧುವಿಗೆ ಹೋಗುವುದರಿಂದಾಗಿದೆ.

ಮೇಲೆ ಹೇಳಿದ ಕಾರಣದಿಂದ ಪುತ್ರರಿರುವಾಗ ಅವರ ಮಕ್ಕಳಿಗೆ ಮಾತ್ರವಲ್ಲ, ಹಿಂದೆ ಮೃತರಾದ ಪುತ್ರರ ಮಕ್ಕಳಿಗೂ ಸೊತ್ತಿನಲ್ಲಿ ಪಾಲು ಇರಲಾರದು. ಯಾಕೆಂದರೆ ಇಲ್ಲಿ ದಾಯಧನದ ಹಕ್ಕು ಕುಟುಂಬ ಶೃಂಖಲೆಯ ಅತಿ ಹತ್ತಿರದ ಕೊಂಡಿಯಾಗಿರುವ ಪೌತ್ರನಿಗೆ ಹೋಗುವುದಿಲ್ಲ. ಇದು ಹದೀಸ್ ವಚನಗಳ ಬೇಡಿಕೆಯೂ ಇಸ್ಲಾಮೀ ವಿದ್ವಾಂಸರ ಒಮ್ಮತದ ಅಭಿಪ್ರಾಯವೂ ಆಗಿದೆ.

ಮೃತನ ಮಗನು ಬದುಕಿರುವ ಸ್ಥಿತಿಯಲ್ಲಿ ಅನಾಥನಾದ ಪೌತ್ರನಿಗೆ ಆತನ ಸೊತ್ತಿನಲ್ಲಿ ಹಕ್ಕು ನೀಡುವುದಕ್ಕೆ ಕುರ್‌ಆನ್, ಹದೀಸ್ ಮುಂತಾದ ಆಧಾರಗಳ ಬೆಂಬಲ ವಾಗಲಿ, ಬೌದ್ಧಿಕ ಅಂಗೀಕಾರವಾಗಲಿ ಇಲ್ಲ. ಮೃತ ಪುತ್ರನು ಬದುಕಿರುವನೆಂದು ಊಹಿಸಿ, ಆ ಸ್ಥಾನದಲ್ಲಿ ಆತನ ಸಂತಾನಗಳನ್ನು ಪ್ರತಿನಿಧಿಗೊಳಿಸಿ ದಾಯಧನದಲ್ಲಿ ಪಾಲು ನೀಡುವ ಪ್ರಾತಿನಿಧ್ಯ ವ್ಯವಸ್ಥೆಯನ್ನು ಅಂಗೀಕರಿಸುವುದಿದ್ದರೆ ಮಾತ್ರ ಪುತ್ರನು ಬದುಕಿರುವಾಗ ಅನಾಥ ಪೌತ್ರನಿಗೆ ಹಕ್ಕು ದೊರೆಯುತ್ತದೆ. ವಾರೀಸು ಹಕ್ಕು ವ್ಯವಸ್ಥೆಯಲ್ಲಿ ಎಲ್ಲಾದರೂ ಪ್ರಾತಿನಿಧ್ಯ ತತ್ವವನ್ನು ಅಂಗೀಕರಿಸಿದರೆ ಎಲ್ಲ ಕಡೆಗಳಲ್ಲಿಯೂ ಅದನ್ನು ಜಾರಿಗೊಳಿಸುವುದು ಕಡ್ಡಾಯವಾಗುತ್ತದೆ. ಅನಾಥ ಪೌತ್ರರ ವಿಷಯದಲ್ಲಿ ಮಾತ್ರ ಪ್ರಾತಿನಿಧ್ಯ ತತ್ವವನ್ನು ಅಂಗೀಕರಿಸಿ ಇತರ ಯಾವ ಸಂದರ್ಭದಲ್ಲಿಯೂ ಅದನ್ನು ಅಂಗೀಕರಿಸದಿರುವುದಕ್ಕೆ ಯಾವುದೇ ಆಧಾರ ಅಥವಾ ಸಮರ್ಥನೆಯಿಲ್ಲ. ಪ್ರಾತಿನಿಧ್ಯ ಸಿದ್ಧಾಂತವನ್ನು ಅಂಗೀಕರಿಸಿದರೆ ಪತಿಯ ಮರಣದ ಬಳಿಕ ಪತ್ನಿಯು ಮರಣ ಹೊಂದಿದರೆ ಪತ್ನಿಯ ವಾರೀಸು ಸೊತ್ತಿನಲ್ಲಿ ಪತಿಯ ಪಾಲನ್ನು ಮೃತ ಪತಿಯ ಹತ್ತಿರದ ಸಂಬಂಧಿಕರಿಗೆ ನೀಡ ಬೇಕಾಗುವುದು. ಪತ್ನಿಯ ಬಳಿಕ ಪತಿ ತೀರಿಕೊಂಡರೆ ಪತ್ನಿಯ ಪಾಲನ್ನು ಅವರ ತಾಯಿ, ತಂದೆಯಂತಹ

ನಿಕಟ ಸಂಬಂಧಿಕರಿಗೂ ನೀಡಬೇಕಾಗುವುದು. ತಂದೆಯು ಬದುಕಿಲ್ಲದ ಒಬ್ಬನು ಆತನಿಗಿಂತ ಮುಂಚೆಯೇ ತೀರಿಹೋದ ತಂದೆಯ ಎಲ್ಲ ಉತ್ತರಾಧಿಕಾರಿಗಳನ್ನು ತಂದೆಯ ಪ್ರತಿನಿಧಿಗಳೆಂದು ಪರಿಗಣಿಸಿ ಹಕ್ಕು ನೀಡಬೇಕಾಗುವುದು. ಇದರಿಂದ ಸಹೋದರ ಸಹೋದರಿಯರಿಗೂ ಪಿತೃ ಸಹೋದರರಿಗೂ ಅವರ ಪುತ್ರರೆಲ್ಲರಿಗೂ ವಾರೀಸು ಹಕ್ಕು ನಿರ್ಣಯಿಸಿರುವುದು ನಿಷ್ಫಲ ಮತ್ತು ನಿರರ್ಥಕವಾಗುತ್ತದೆ. ಅವರಿಗೆ ದೊರೆಯುವ ಪಾಲಿನಲ್ಲಿ ತೀವ್ರ ಬದಲಾವಣೆಯಾಗುತ್ತದೆ. ಹೀಗೆ ಅನಾಥ ಪೌತ್ರರ ಲಾಭಕ್ಕಾಗಿ ನಿರ್ಮಿಸುವ ಅದೇ ವ್ಯವಸ್ಥೆಯು ಅವರ ಸೊತ್ತು ಇತರ ಸಂಬಂಧಿಕರಿಗೆ ಹರಿದು ಹೋಗುವ ಅನೇಕ ಕಾಲುವೆಗಳಾಗಿ ಪರಿಣಮಿಸುತ್ತದೆ. ತನ್ಮೂಲಕ ತರ್ಕಬದ್ಧ ಮತ್ತು ಸುವ್ಯವಸ್ಥಿತವಾದ ವಾರೀಸು ಹಕ್ಕು ವ್ಯವಸ್ಥೆಯು ತರ್ಕಹೀನ ಮತ್ತು ಅಸಂತುಲಿತವಾಗುತ್ತದೆ.

ಪರಲೋಕ ವಿಶ್ವಾಸವನ್ನು ದೃಢಗೊಳಿಸಿ ಕಾರುಣ್ಯದ ಭಾವನೆಗಳನ್ನು ಬೆಳೆಸುವ ಮೂಲಕ ಅನಾಥ ಪೌತ್ರರಿಗೆ ವಸಿಯ್ಯತ್ ಮಾಡುವ ನೈತಿಕ ಹಕ್ಕು ಪಿತಾಮಹರಿಗಿದೆಯೆಂಬ ಪ್ರಜ್ಞೆಯನ್ನು ಸಮಾಜದಲ್ಲಿ ಬೆಳೆಸುವುದೇ ಆ ಸಮಸ್ಯೆಯ ಪರಿಹಾರದ ಮಾರ್ಗೋಪಾಯವಾಗಿದೆ. ಅದಲ್ಲದೇ ಅನೇಕ ಆಧುನಿಕ ವಿದ್ವಾಂಸರು ಅಭಿಪ್ರಾಯಪಟ್ಟಿರುವಂತೆ ವಸಿಯ್ಯತ್ ಮಾಡುವಂತೆ ಕಾನೂನು ಪ್ರಕಾರ ಪಿತಾಮಹನನ್ನು ನಿರ್ಬಂಧಿಸಬಹುದಾಗಿದೆ. ಈಜಿಪ್ಟ್ ನಂತಹ ಕೆಲವು ಮುಸ್ಲಿಮ್ ರಾಷ್ಟ್ರಗಳು ಕಡ್ಡಾಯ ವಸಿಯ್ಯತ್‌ಗೆ ಶಾಸನಾತ್ಮಕ ಮನ್ನಣೆ ನೀಡಿದೆ. ಆ ಪ್ರಕಾರ ಅನಾಥ ಪೌತ್ರರ ತಂದೆಯು ಬದುಕಿದ್ದರೆ ಲಭಿಸಬಹುದಾಗಿದ್ದ ಸೊತ್ತು ಅಥವಾ ವಸಿಯ್ಯತ್ ಅನುಮತಿಸಲಾಗಿರುವ $^1/_3$ ಪಾಲು, ಈ ಪೈಕಿ ಕಡಿಮೆಯಾಗಿರುವುದನ್ನು ಮೃತನ ಸೊತ್ತಿನಿಂದ ತೆಗೆದು ಅನಾಥ ಪೌತ್ರರಿಗೆ ನೀಡಿ ಉಳಿದುದನ್ನು ನೈಜ ಹಕ್ಕುದಾರರಿಗೆ ಹಂಚಲಾಗುತ್ತದೆ.

## ಪಿತಾಮಹ ಮತ್ತು ಸಹೋದರರು

ತಾಯಿಯು ಒಂದೇ ಆಗಿರುವ ಸಹೋದರ ಸಹೋದರಿಯರ ಹಕ್ಕನ್ನು ತಂದೆಯಂತೆ ಪಿತಾಮಹನೂ ತಡೆಯುವನೆಂಬ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಆದರೆ, ತಂದೆ ತಾಯಂದಿರು ಒಂದೇ ಆಗಿರುವ ಸಹೋದರ ಸಹೋದರಿಯರು ಅಥವಾ ಕೇವಲ ತಂದೆ ಒಂದೇ ಆಗಿರುವ ಸಹೋದರರು ಪಿತಾಮಹನೊಂದಿಗೆ ಹಕ್ಕುದಾರರಾಗಿದ್ದರೆ ಪಿತಾಮಹನು ಅವರ ಹಕ್ಕಿಗೆ ತಡೆಯಾಗುತ್ತಾನೆಯೇ ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. ಪಿತಾಮಹನು ಅವರ ಹಕ್ಕನ್ನು ತಡೆಯುವನೆಂದು ಅಬೂಬಕರ್, ಇಬ್ನು ಉಮರ್, ಇಬ್ನು ಅಬ್ಬಾಸ್ ಮುಂತಾದವರ ಅಭಿಪ್ರಾಯ. ಪ್ರಸ್ತುತ ಅಭಿಪ್ರಾಯವನ್ನು ಇಮಾಮ್ ಅಬೂ ಹನೀಫಾ ಅಂಗೀಕರಿಸಿದ್ದಾರೆ. ಸಹಾಬಿಗಳು ಮತ್ತು ತಾಬಿಈಗಳಿಗೆ ಸೇರಿದ ಹೆಚ್ಚಿನ ವಿದ್ವಾಂಸರು ಪಿತಾಮಹನೊಂದಿಗೆ ಅವರಿಗೂ ಹಕ್ಕು ದೊರೆಯುವುದೆಂದು ಅಭಿಪ್ರಾಯಪಟ್ಟಿದ್ದಾರೆ. ಮಾಲಿಕ್, ಶಾಫೀ ಮತ್ತು ಅಹ್ಮದ್ ಬಿನ್ ಹಂಬಲ್‌ರ ಅಭಿಪ್ರಾಯವೂ ಇದೇ ಆಗಿದೆ.

ಪಿತಾಮಹನೊಂದಿಗೆ ಸಹೋದರರಿಗೂ ಪಾಲು ದೊರೆಯುವುದೆಂದು ಅಭಿಪ್ರಾಯ ಪಟ್ಟವರೇ ಅವರ ಹಕ್ಕನ್ನು ಹಂಚುವ ವಿಷಯದಲ್ಲಿ ಭಿನ್ನ ದೃಷ್ಟಿಕೋನಗಳನ್ನು ಹೊಂದಿದ್ದಾರೆ. ಝೈದ್‌ಬಿನ್ ಸಾಬಿತ್‌ರ ಪ್ರಸಿದ್ಧ ದೃಷ್ಟಿಕೋನದಂತೆ ಪಾಲು ಮಾಡ ಬೇಕಾದ ಕ್ರಮ ಹೀಗಿದೆ:

ಪಿತಾಮಹ ಮತ್ತು ಸಹೋದರರು ಹಕ್ಕುದಾರರಾದಾಗ ಅವರೊಂದಿಗೆ ನಿಶ್ಚಿತ ಪಾಲುದಾರರು ಇರಬಹುದು ಅಥವಾ ಇಲ್ಲದಿರಲೂಬಹುದು. ನಿಶ್ಚಿತ ಪಾಲುದಾರರು (ದವುಲ್ ಫರ್‌ದ್) ಯಾರೂ ಇಲ್ಲದಿದ್ದರೆ, ಸಹೋದರರೊಂದಿಗೆ, ಒಟ್ಟು ಸೊತ್ತಿನ ಸಮಾನ ಪಾಲು ಅಥವಾ ಅದರ $^1/_3$- ಇದರಲ್ಲಿ ಹೆಚ್ಚಿರುವ ಅಂಶವು ಪಿತಾಮಹನ ಪಾಲು ಆಗಿರುವುದು.

ಉದಾ: 1. ಪಿತಾಮಹ, ಸ್ವಂತ ಸಹೋದರ, ಸ್ವಂತ ಸಹೋದರಿ ಎಂಬಿವರು ಹಕ್ಕುದಾರರಾಗಿದ್ದರೆ ಸಹೋದರರೊಂದಿಗೆ ಸೊತ್ತು ಹಂಚಿಕೊಳ್ಳುವಾಗ ಪಿತಾಮಹನಿಗೆ ಹೆಚ್ಚು ದೊರೆಯುತ್ತದೆ. ಯಾಕೆಂದರೆ ಆಗ ಅವರಿಗೆ $^2/_5$ ದೊರೆಯುವುದು. ಇದು ಒಟ್ಟು ಸೊತ್ತಿನ $^1/_3$ಕ್ಕಿಂತ ಅಧಿಕವಷ್ಟೆ.

ಉದಾ: 2. ಪಿತಾಮಹ ಮತ್ತು ನಾಲ್ವರು ಸಹೋದರರು ಹಕ್ಕುದಾರರಾಗಿದ್ದಾರೆ. ಪಿತಾಮಹನಿಗೆ ಸೊತ್ತಿನ $^1/_3$ ನೀಡುವಾಗ ಹೆಚ್ಚು ದೊರೆಯುವುದು. ಸಹೋದರರ ಜತೆ ಸಮಾನವಾಗಿ ಹಂಚುವಾಗ ಪಿತಾಮಹನಿಗೆ ಕೇವಲ $^1/_5$ ದೊರೆಯುವುದು.

ಪಿತಾಮಹ ಮತ್ತು ಸಹೋದರರೊಂದಿಗೆ ನಿಶ್ಚಿತ ಪಾಲುದಾರರು ಮತ್ತು ಹಕ್ಕುದಾರರಿದ್ದರೆ ಕೆಳಗಿನ ಈ ಮೂರು ಲೆಕ್ಕಗಳಲ್ಲಿ ಹೆಚ್ಚು ದೊರೆಯುವ ಲೆಕ್ಕದಂತೆ ಪಿತಾಮಹನಿಗೆ ಹಕ್ಕನ್ನು ಹಂಚಬೇಕು-

i) ನಿರ್ದಿಷ್ಟ ಪಾಲುದಾರರ ಪಾಲು ಕಳೆದು ಉಳಿದುದರ $^1/_3$.

ii) ಒಟ್ಟು ಸೊತ್ತಿನ $^1/_6$.

iii) ಪಾಲುದಾರರ ಪಾಲು ಕಳೆದು ಸಹೋದರರು ಮತ್ತು ಪಿತಾಮಹರು ಸಮನಾಗಿ ಹಂಚಿಕೊಳ್ಳುವುದು.

ಉದಾ: 1. ತಾಯಿ, ಐವರು ಸಹೋದರರು, ಪಿತಾಮಹ ಎಂಬಿವರು ಹಕ್ಕುದಾರ ರಾಗುವಾಗ ಪಾಲುದಾರಳಾಗಿರುವ ತಾಯಿಯ ಅಂಶವನ್ನು ಕಳೆದು ಬಾಕಿ ಉಳಿದುದರ $^1/_3$ ಲೆಕ್ಕ ಹಾಕುವಾಗ ಪಿತಾಮಹನಿಗೆ ಹೆಚ್ಚು ದೊರೆಯುತ್ತದೆ. ಲೆಕ್ಕ ಮಾಡುವ ಕ್ರಮ:

ತಾಯಿಯ ನಿಶ್ಚಿತ $^1/_6$ ಪಾಲು ಕಳೆದರೆ $^5/_6$ ಬಾಕಿ ಉಳಿಯುತ್ತದೆ. ಅದರ $^1/_3$ನ್ನು ಲೆಕ್ಕ ಹಾಕಲು ಅಸಲುಲ್ ಮಸ್‌ಅಲಃ (6)ವನ್ನು ಗುಣಿಸಲಾಗುತ್ತದೆ (6X3=18). ಸೊತ್ತನ್ನು 18 ಪಾಲು ಮಾಡಿ ಪ್ರತಿಯೊಬ್ಬರ ಅಂಶವನ್ನು ಲೆಕ್ಕ ಹಾಕಲಾಗುತ್ತದೆ.

ತಾಯಿ = $^3/_{18}$.

ಪಿತಾಮಹ $^5/_{18}$ (ಮಿಕ್ಕಿದುದರ $^1/_3$)

5 ಸಹೋದರರು $^{10}/_{18}$ (ಪ್ರತಿಯೊಬ್ಬರಿಗೂ 2 ಪಾಲಿನಂತೆ)

ಪ್ರಸ್ತುತ ಸಮಸ್ಯೆಯಲ್ಲಿ ಒಟ್ಟು ಸೊತ್ತಿನ $^1/_6$ರಂತೆ ಲೆಕ್ಕ ಹಾಕಿದರೆ $^5/_{30}$ ಮತ್ತು ಸಹೋದರರ ಜತೆ ಸಮನಾಗಿ ಹಂಚಿದರೆ ಪಿತಾಮಹನಿಗೆ $^5/_{36}$ ಮಾತ್ರ ದೊರೆಯುವುದು.

ಉದಾ: 2: ಪಿತಾಮಹ, ಓರ್ವ ಸಹೋದರ, ಇಬ್ಬರು ಹೆಣ್ಮಕ್ಕಳು ಮತ್ತು ಪತ್ನಿಯು ಹಕ್ಕುದಾರರಾಗಿದ್ದರೆ ಒಟ್ಟು ಸೊತ್ತಿನ $^1/_6$ರ ಲೆಕ್ಕ ಪ್ರಕಾರ ಪಿತಾಮಹನಿಗೆ ಹೆಚ್ಚು ದೊರೆಯುವುದು. ಅರ್ಥಾತ್, $^4/_{24}$ ದೊರೆಯುತ್ತದೆ. ಬಾಕಿ ಉಳಿದುದರ $^1/_3$ರ ಲೆಕ್ಕ ಪ್ರಕಾರ $^5/_{72}$ ಮತ್ತು ಸಮನಾಗಿ ಹಂಚುವಾಗ $^5/_{48}$ ಮಾತ್ರ ದೊರೆಯುವುದು.

ಉದಾ- 3: ಪಿತಾಮಹ, ಸಹೋದರ ಮತ್ತು ಮಾತಾಮಹಿ ಹಕ್ಕುದಾರರಾಗಿರುವುದು, ಸಮನಾಗಿ ಹಂಚಿಕೊಳ್ಳುವಾಗ ಪಿತಾಮಹನಿಗೆ ಹೆಚ್ಚು ದೊರೆಯುವುದಕ್ಕೆ ಉದಾಹರಣೆ ಯಾಗಿದೆ. ಸಮನಾಗಿ ಹಂಚುವಾಗ ಪಿತಾಮಹನಿಗೆ $^5/_{12}$ ದೊರೆಯುತ್ತದೆ. ಇತರ ಲೆಕ್ಕ ಪ್ರಕಾರ $^1/_6$ ಅಥವಾ $^5/_{18}$ ಮಾತ್ರ ದೊರೆಯುತ್ತದೆ.

ನಿರ್ದಿಷ್ಟ ಪಾಲುದಾರರ ಅಂಶವನ್ನು ನೀಡಿದ ಬಳಿಕ ಸೊತ್ತಿನ $^1/_6$ ಅಥವಾ ಅದಕ್ಕಿಂತ ಕಡಿಮೆ ಮಾತ್ರ ಬಾಕಿ ಉಳಿದಿದ್ದರೆ ಪಿತಾಮಹನಿಗೆ $^1/_6$ ನೀಡಿ ಸಹೋದರರ ಹಕ್ಕು ತಡೆಯಲ್ಪಡುತ್ತದೆ.

ಉದಾ: 1. ಇಬ್ಬರು ಹೆಣ್ಮಕ್ಕಳು, ತಾಯಿ, ಪಿತಾಮಹ, ಸಹೋದರ ಎಂಬಿವರು ಹಕ್ಕುದಾರರಾಗಿರುವಾಗ ಹೆಣ್ಮಕ್ಕಳ $^2/_3$ ಭಾಗ ಮತ್ತು ತಾಯಿಯ $^1/_6$ ಭಾಗ ನೀಡಿದ ಬಳಿಕ ಸೊತ್ತಿನ $^1/_6$ ಮಾತ್ರ ಉಳಿಯುತ್ತದೆ. ಅದನ್ನು ಪಿತಾಮಹನಿಗೆ ನೀಡಿದರೆ ಸಹೋದರನಿಗೆ ಏನೂ ಉಳಿಯುವುದಿಲ್ಲ.

ಉದಾ: 2. ಪತಿ, 2 ಹೆಣ್ಮಕ್ಕಳು, ಪಿತಾಮಹ, ಸಹೋದರರು ಎಂಬಿವರು ಹಕ್ಕುದಾರರಾಗಿದ್ದರೆ ಪತಿಯ $^1/_4$ ಹೆಣ್ಮಕ್ಕಳ $^2/_3$ ನೀಡಿದರೆ ಆ ಬಳಿಕ $^1/_6$ ಉಳಿಯುವುದಿಲ್ಲ. ಇಂಥ ಸಂದರ್ಭಗಳಲ್ಲಿ ಪಾಲುಗಳನ್ನು (ಔಲ್) ಹೆಚ್ಚಿಸಿ ಪಿತಾಮಹನಿಗೆ $^1/_6$ ನೀಡಬೇಕು. ಸಹೋದರರಿಗೆ ಹಕ್ಕು ದೊರೆಯುವುದಿಲ್ಲ. ಆದರೆ ಅಕ್ದರಿಯ್ಯ ಮಸ್‌ಅಲವು ಪ್ರಸ್ತುತ ನಿಯಮಕ್ಕೆ ಅಪವಾದವಾಗಿದೆ.

'ಅಕ್ದರಿಯ್ಯ ಮಸ್‌ಅಲಃ' ಎಂಬುದು ಇಸ್ಲಾಮೀ ವಾರೀಸು ಹಕ್ಕು ನಿಯಮದ ಒಂದು ಪಾರಿಭಾಷಿಕ ಪದವಾಗಿದೆ. ಮೃತನ ಪಿತಾಮಹ ಮತ್ತು ಸಹೋದರ ಸಹೋದರಿಯರು ದಾಯಧನಕ್ಕೆ ಒಟ್ಟಿಗೆ ಹಕ್ಕುದಾರರಾಗಿರುವಾಗ ಪಿತಾಮಹರಿಗೆ ಸಹೋದರ ಸಹೋದರಿಯರಿಗಿಂತ ಹೆಚ್ಚಿನ ಪರಿಗಣನೆ ನೀಡಬೇಕಾಗುತ್ತದೆ. (ಪಿತಾಮಹ ಮತ್ತು ಸಹೋದರ ಸಹೋದರಿಯರು ತಂದೆಯ ತಂದೆ ಮತ್ತು ಮಕ್ಕಳಾಗಿದ್ದಾರೆ. ತಂದೆ ಮತ್ತು ಮಕ್ಕಳು ಒಟ್ಟಿಗೆ ಹಕ್ಕುದಾರರಾಗುವಾಗ ತಂದೆಯು ಮಕ್ಕಳನ್ನಾಗಲಿ ಮಕ್ಕಳು ತಂದೆಯನ್ನಾಗಲಿ ತಡೆಯುವುದಿಲ್ಲ. ಆದರೆ ಪಿತಾಮಹನಿಗೆ ಪಿತನ ಅಭಾವದಲ್ಲಿ ಪಿತನ ಪದವಿಯೂ ಇದೆಯಷ್ಟೆ. ಆ ಕಾರಣದಿಂದಲೇ ಈ ವಿಶೇಷ ಪರಿಗಣನೆ.)

ಪಾಲಿನ ಹಕ್ಕುದಾರರಲ್ಲಿ ಒಬ್ಬರೆಂದು ಪರಿಗಣಿಸಿ ಒಟ್ಟು ಸೊತ್ತಿನ $^1/_6$ ಇತರ ಪಾಲುದಾರರ ಅಂಶವನ್ನು ಕಳೆದು ಉಳಿದುದರ $^1/_3$ ಸಹೋದರ ಸಹೋದರಿಯರ ಪೈಕಿ ಒಬ್ಬರೆಂದು ಪರಿಗಣಿಸಿ, ಅವರಲ್ಲಿ ಓರ್ವ ಪುರುಷನ ಅಂಶ; ಈ ಮೂರು ಪರಿಗಣನೆಗಳಲ್ಲಿ ಪಿತಾಮಹನಿಗೆ ಅಧಿಕ ಯಾವ ಪ್ರಕಾರ ದೊರೆಯುವುದೆಂದು ನೋಡಿ ಆ ಪ್ರಕಾರ ದಾಯ ಧನದಿಂದ ಪಾಲು ದೊರೆಯುವುದು. ಅದು ಪಿತಾಮಹನ ಹಕ್ಕಾಗಿರುವುದು. ಇತರ ಹಕ್ಕುದಾರರಿಗೆ ಅವರ ಪಾಲನ್ನು ಕೊಟ್ಟರೆ $^1/_6$ ಉಳಿಯದಿದ್ದರೆ ಪಿತಾಮಹನಿಗೆ ಪುನಃ $^1/_6$ ನಿರ್ಣಯಿಸಿ ಪಾಲುಗಳನ್ನು 'ಔಲ್' (ಪಾಲುಗಳು ಹೆಚ್ಚಿನ ನಿಷ್ಪತ್ತಿಯಂತೆ ಪ್ರತಿಯೊಂದು ಪಾಲಿನ ಪ್ರಮಾಣ ಕಡಿಮೆಗೊಳಿಸುವುದು) ಮಾಡಬೇಕು. ಪಿತಾಮಹನನ್ನು ಸಹೋದರರ ಪೈಕಿ ಓರ್ವರೆಂದು ಪರಿಗಣಿಸುವ ಸಾಧ್ಯತೆಯಿರುವುದರಿಂದ ಅವರ ಉಪಸ್ಥಿತಿಯಲ್ಲಿ ಸಹೋದರಿಯರು ಪಾಲಿನ ಹಕ್ಕುದಾರರಾಗಿರುವುದಿಲ್ಲ. ಈ ನಿಬಂಧನೆಗೆ ಅಪವಾದವಾಗಿ ಕೇವಲ ಒಂದು ಉದಾಹರಣೆಯಿದೆ. ಅದಕ್ಕೆ 'ಮಸ್ಅಲಃ ಅಕ್ದರಿಯ್ಯ' (ಅಕ್ದರಿಯ್ಯ ಸಮಸ್ಯೆ) ಎಂದು ಹೇಳುತ್ತಾರೆ. ಈ ಸಮಸ್ಯೆಯ ಕುರಿತು ಝೈದ್‌ಬಿನ್ ಸಾಬಿತ್‌ರೊಡನೆ ಅಕ್ದರ್ ಎಂಬೋರ್ವರು ಪ್ರಥಮವಾಗಿ ವಿಚಾರಿಸಿದ್ದರು. ಆದ್ದರಿಂದ ಅದಕ್ಕೆ 'ಅಕ್ದರಿಯ್ಯ' ಎಂಬ ಹೆಸರು ಬಂತು. ತಾಯಿ, ಪತಿ, ಪಿತಾಮಹ, ಸಹೋದರಿ- ಈ 4 ಮಂದಿ ಮಾತ್ರ ಇದರ ಹಕ್ಕುದಾರರು. ಇದರಲ್ಲಿ ತಾಯಿಗೆ $^1/_3$, ಪತಿಗೆ $^1/_2$ ಕೊಟ್ಟ ಬಳಿಕ ಪಿತಾಮಹನಿಗೆ $^1/_6$ ಮಾತ್ರ ಉಳಿಯುತ್ತದೆ. ಇಲ್ಲಿ ಸಹೋದರಿಗೆ ಏನೂ ದೊರೆಯುವುದಿಲ್ಲ. ಆದ್ದರಿಂದ ಆಕೆಯನ್ನೂ ಪಾಲಿನ ಹಕ್ಕುದಾರರಲ್ಲಿ ಓರ್ವಳೆಂದು ಪರಿಗಣಿಸಿ ಆಕೆಗೂ ಅರ್ಧಪಾಲು ಲೆಕ್ಕ ಮಾಡಿ ಪಾಲುಗಳನ್ನು 'ಔಲ್' ಮಾಡಲಾಗುತ್ತದೆ. ಆಗ ಪತಿಯ ಮತ್ತು ಸಹೋದರಿಯ ಅರ್ಧ ಒಂಭತ್ತರಲ್ಲಿ ಮೂರು ($^1/_3$) ಪ್ರಕಾರವೂ ತಾಯಿಯ ಮೂರನೇ ಒಂದು ಒಂಭತ್ತರಲ್ಲಿ ಮೂರು ($^1/_3$) ಪ್ರಕಾರವಾಗಿಯೂ ತಾಯಿಯ $^1/_3$ ಒಂಭತ್ತರಲ್ಲಿ ಎರಡಾಗಿಯೂ ಪಿತಾಮಹನ $^1/_6$ ಒಂಭತ್ತರಲ್ಲಿ ಒಂದಾಗಿಯೂ ಕುಗ್ಗುತ್ತದೆ. ಪಿತಾಮಹ, ಸಹೋದರ ಸಹೋದರಿಯರು ಒಟ್ಟಿಗೆ ಇರುವಾಗ ಪಿತಾಮಹನನ್ನು ಸಹೋದರರಲ್ಲಿ ಓರ್ವರೆಂದು ಪರಿಗಣಿಸುವುದರಿಂದ ಅವರೀರ್ವರಿಗೂ ಒಟ್ಟಿಗೆ ದೊರೆಯುವ ($^1/_9+^3/_9=^4/_9$) 9ರಲ್ಲಿ 4ನ್ನು ಪುನಃ ಮೂರಾಗಿ ವಿಭಾಗಿಸಿ ಅದರಲ್ಲಿ ಒಂದು ಪಾಲು ಸಹೋದರಿಗೂ ಎರಡು ಪಾಲು ಪಿತಾಮಹನಿಗೂ ನೀಡಲಾಗುತ್ತದೆ. ಆಗ ಸೊತ್ತಿನ ಒಟ್ಟು 24 ಪಾಲುಗಳಲ್ಲಿ 9 ಪಾಲು ಪತಿಗೂ ಆರು ತಾಯಿಗೂ 8 ಪಿತಾಮಹನಿಗೂ 4 ಸಹೋದರಿಗೂ ದೊರೆಯುತ್ತದೆ. ಇದನ್ನು 'ಅಕ್ದರಿಯ್ಯ' ಸಮಸ್ಯೆಯೆನ್ನಲಾಗುತ್ತದೆ.

| | | |
|---|---|---|
| ತಾಯಿ | $^1/_3$ X 6 = | 2X3= 6 |
| ಪತಿ | $^1/_2$ X 6 = | 3X3= 9 |
| ಪಿತಾಮಹ | $^1/_6$+ } X 6 = | 4X3=12 |
| ಸಹೋದರಿ | $^1/_2$ | 9X3=27 |

ತಾಯಿ 6,
ಪತಿ 9,
ಪಿತಾಮಹ 8 ($^{12}/_{3}$ X 2 = 8),
ಸಹೋದರಿ 4 ($^{12}/_{3}$ X 1 = 4).

ಈ ಸಮಸ್ಯೆಯಲ್ಲಿ ಸಹೋದರಿಯ ಬದಲಾಗಿ ಸಹೋದರನಿದ್ದರೆ, ಆತನು ಕೇವಲ ಶಿಷ್ಟ ಹಕ್ಕುದಾರ (ಅಸ್ವಬಃ)ನಾಗಿರುವುದರಿಂದ ಏನೂ ದೊರೆಯಲಾರದು. ಒಂದಕ್ಕಿಂತ ಹೆಚ್ಚು ಸಹೋದರ ಸಹೋದರಿಯರಿದ್ದರೆ ತಾಯಿಯ $^{1}/_{3}$ ಎಂಬುದು $^{1}/_{6}$ ಆಗುತ್ತದೆ. ಆಗ ತಾಯಿ, ಪತಿ, ಪಿತಾಮಹ ಎಂಬಿವರ ಪಾಲು ಕಳೆದರೆ $^{1}/_{6}$ ಬಾಕಿ ಉಳಿಯುತ್ತದೆ. ಅದನ್ನು ಸಹೋದರ ಸಹೋದರಿಯರಿಗೆ ನಿಯಮದಂತೆ (ಸ್ತ್ರೀಯ ಎರಡು ಪಾಲು ಪುರುಷನಿಗೆ) ಹಂಚಲಾಗುವುದು.

## ತಲ್‌ಸೀಲ್

ಮೃತ ವ್ಯಕ್ತಿಯ ವಾರೀಸುದಾರರಿಗೆ ಆತನ ಸೊತ್ತನ್ನು ಇಸ್ಲಾಮೀ ನಿಯಮದಂತೆ ಸರಿಯಾಗಿ ಹಂಚಲು ಪಾಲುಗಳ ಒಟ್ಟು ಮೊತ್ತವನ್ನು ಕಂಡು ಹಿಡಿಯುವುದನ್ನು 'ತಲ್‌ಸೀಲ್' ಎನ್ನಲಾಗುತ್ತದೆ. ಈ ಮೊತ್ತವನ್ನು 'ಅಸಲುಲ್ ಮಸ್‌ಅಲಃ' ಎಂದು ಕರೆಯಲಾಗುತ್ತದೆ.

ಹಕ್ಕುದಾರರು ಅಸ್ವಬಃದವರು, ನಿರ್ದಿಷ್ಟ ಪಾಲುದಾರರು ಅಥವಾ ಎರಡೂ ವರ್ಗಕ್ಕೆ ಸೇರಿದವರಾಗಿರಬಹುದು. ಎಲ್ಲರೂ ಅಸ್ವಬಃರಾಗಿದ್ದರೆ ಒಟ್ಟು ಜನರ ಸಂಖ್ಯೆಯನ್ನು ನೋಡಬೇಕು. ಆದರೆ ಪುರುಷರನ್ನು ಈರ್ವರು ಸ್ತ್ರೀಯರಿಗೆ ಸಮಾನವಾಗಿ ಲೆಕ್ಕ ಹಾಕಬೇಕು.

ಉದಾ: ಮೃತ ವ್ಯಕ್ತಿಗೆ ಓರ್ವ ಪುತ್ರಿ ಮತ್ತು ಈರ್ವರು ಪುತ್ರರಿದ್ದರೆ ಅಸಲುಲ್ ಮಸ್‌ಅಲ. ಐದು ಆಗಿರುವುದು' ಗಂಡು ಮಕ್ಕಳಿಗೆ ತಲಾ 2 ಪಾಲಿರುವುದು. ಒಂದು ಮಗಳಿಗೆ. ಎರಡು ಗಂಡು ಮಕ್ಕಳು = 2 + 2 = 4.

ಮಗಳು = 1.

ಒಟ್ಟು = 5.

ಹಕ್ಕುದಾರರಲ್ಲಿ ನಿರ್ದಿಷ್ಟ ಪಾಲುದಾರನಾಗಿ ಕೇವಲ ಒಬ್ಬನಿದ್ದರೆ ಆ ಪಾಲಿನ ಛೇದವು ಪಾಲುಗಳ ಒಟ್ಟು ಮೊತ್ತವಾಗಿರುವುದು (ಅಸಲುಲ್ ಮಸ್‌ಅಲಃ). ಉದಾ: ಸ್ತ್ರೀ ತೀರಿಕೊಂಡಳು. ಪತಿ ಮತ್ತು ಪಿತೃ ಸಹೋದರ ಹಕ್ಕುದಾರರಾಗಿದ್ದಾರೆ. ಹಾಗಾದರೆ 2 ಅಸಲುಲ್ ಮಸ್‌ಅಲಃ ಆಗಿರುವುದು. ಪತಿಗೆ ಅರ್ಧ, ಉಳಿದದ್ದು ಅಸ್ವಬಃ ಎಂಬ ದೃಷ್ಟಿಯಿಂದ ಪಿತೃ ಸಹೋದರನಿಗೆ ದೊರೆಯುತ್ತದೆ. ಪಾಲುದಾರರು 2 ಅಥವಾ ಅದಕ್ಕಿಂತ ಅಧಿಕವಿದ್ದರೆ ಛೇದಗಳ ಲ.ಸಾ. ಅ, 'ಅಸಲುಲ್ ಮಸ್‌ಅಲಃ' ಆಗಿರುವುದು. ಉದಾ: ಮೃತನಿಗೆ ಪತ್ನಿ, ತಾಯಿ, ಮಗಳು, ಸ್ವಂತ ಸಹೋದರಿ ಎಂಬವರು ಹಕ್ಕುದಾರರಾಗಿದ್ದರೆ ಪತ್ನಿಗೆ $^{1}/_{8}$, ತಾಯಿಗೆ $^{1}/_{6}$, ಮಗಳಿಗೆ $^{1}/_{2}$, ಅಸ್ವಬಃಳೆಂಬ ನೆಲೆಯಲ್ಲಿ ಉಳಿದದ್ದು ಸಹೋದರಿಗೆ ದೊರೆಯುತ್ತದೆ. ಇಲ್ಲಿ ಅಸಲುಲ್ ಮಸ್‌ಅಲಃ 24 (8, 6, 2 ಎಂಬೀ ಛೇದಗಳ ಲ.ಸಾ.ಅ) ಆಗಿರುತ್ತದೆ.

| | | | |
|---|---|---|---|
| ಪತ್ನಿ | $^1/_8$ X 24 | = | 3 |
| ತಾಯಿ | $^1/_6$ X 24 | = | 4 |
| ಮಗಳು | $^1/_2$ X 24 | = | 12 |
| ಸಹೋದರಿ | | | 5 |
| ಒಟ್ಟು | | | 24 |

## ತಸ್‌ಹೀಹ್

'ಅಸಲುಲ್ ಮಸ್‌ಅಲಃ'ದಂತೆ ದೊರೆತ ತಮ್ಮ ಪಾಲನ್ನು ಪಾಲುದಾರರಲ್ಲಿ ಕೆಲವರಿಗೆ ಅಂಶ(Fraction)ವಿಲ್ಲದೆ ಹಂಚಲು ಸಾಧ್ಯವಾಗದಿರಬಹುದು. ಪತ್ನಿ, ಮಗ, ಮಗಳು ಹಕ್ಕುದಾರರಾಗುವುದು ಅದಕ್ಕೆ ಉದಾಹರಣೆಯಾಗಿದೆ. ಈ ಸಮಸ್ಯೆಯಲ್ಲಿ 'ಅಸಲುಲ್ ಮಸ್‌ಅಲಃ' 8 ಆಗಿರುವುದು. ಪತ್ನಿಗೆ $^1/_8$ ಮತ್ತು ಉಳಿದ $^7/_8$ ಅಸ್ಬಬಃ ಎಂಬ ನೆಲೆಯಲ್ಲಿ ಮಗನಿಗೂ ಮಗಳಿಗೂ ದೊರೆಯುತ್ತದೆ. ಆದರೆ, ಮಗನಿಗೂ ಮಗಳಿಗೂ ತಮಗೆ ದೊರೆತ $^7/_8$ ಪಾಲನ್ನು ಸರಿಯಾಗಿ ಹಂಚಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಪ್ರತಿಯೊಬ್ಬರ ಪಾಲನ್ನು ಏಕ ಪ್ರಕಾರ ಹಂಚಲು ಸಾಧ್ಯವಾಗುವಂಥ ಬೇರೊಂದು ಸಂಖ್ಯೆಯನ್ನು ಕಂಡು ಹಿಡಿಯಬೇಕಾಗಿದೆ. ಅದನ್ನು ತಸ್‌ಹೀಹ್ ಅಥವಾ ತಸ್‌ಹೀಹುಲ್ ಮಸ್‌ಅಲಃ (ಅಸಲುಲ್ ಮಸ್‌ಅಲಃವನ್ನು ಸರಿಪಡಿಸುವುದು) ಎಂದು ಹೇಳಲಾಗುತ್ತದೆ.

ಕ್ಲಪ್ತವಾಗಿ ವಿಭಜಿಸಲಾಗದಿದ್ದ ಪಾಲುದಾರರ ಸಂಖ್ಯೆಯನ್ನೂ ಅಸಲುಲ್ ಮಸ್‌ಅಲಃ ದಂತೆ ಅವರಿಗೆ ದೊರೆತ ಪಾಲಿನ ಸಂಖ್ಯೆಯನ್ನೂ ತುಲನೆ ಮಾಡಿ ಎರಡನ್ನೂ ಶೇಷವಿಲ್ಲದೆ ಭಾಗಿಸಲು ತಕ್ಕುದಾದ ಸಾಮಾನ್ಯ ಅಂಶವಿದೆಯೇ ಎಂದು ಮೊದಲು ಪರಿಶೀಲಿಸಬೇಕು. ಮೇಲೆ ಹೇಳಿದ ಉದಾಹರಣೆಯಲ್ಲಿ ಪಾಲುದಾರರ ಸಂಖ್ಯೆಯಾಗಿರುವ ಮೂರನ್ನು (ಪುರುಷನು ಇಬ್ಬರು ಸ್ತ್ರೀಯರಿಗೆ ಸಮಾನವಾಗಿರುವುದರಿಂದ ಮಗ ಮತ್ತು ಮಗಳನ್ನು 3 ಮಂದಿಯೆಂದು ಪರಿಗಣಿಸಬೇಕು) ಅವರ ಪಾಲಾಗಿರುವ ಏಳನ್ನೂ ಭಾಗಿಸಬಹುದಾದ ಸಾಮಾನ್ಯ ಅಂಶವಿಲ್ಲ. ಇಂಥ ಸಮಸ್ಯೆಗಳಲ್ಲಿ ಜನರ ಸಂಖ್ಯೆಯಿಂದ ಅಸಲುಲ್ ಮಸ್‌ಅಲಃವನ್ನು ಗುಣಿಸಬೇಕು. ಈ ಗುಣಾಂಕವನ್ನು ಅಸಲುಲ್ ಮಸ್‌ಅಲಃ ಗೊಳಿಸಿದರೆ ಪ್ರತಿಯೊಬ್ಬರಿಗೂ ತಮ್ಮ ಪಾಲನ್ನು ಸರಿಯಾಗಿ ಹಂಚಿಕೊಳ್ಳಬಹುದು. ಮೇಲಿನ ಉದಾಹರಣೆಯಲ್ಲಿ ಅಸಲುಲ್ ಮಸ್‌ಅಲಃ ಆಗಿರುವ 8ನ್ನು ಜನರ ಸಂಖ್ಯೆಯಾಗಿರುವ 3ರಿಂದ ಗುಣಿಸಲಾಗುತ್ತದೆ. 8 X 3 = 24. ಆರಂಭದ ಅಸಲನ್ನು ನಿರ್ಲಕ್ಷಿಸಿ 24ನ್ನು ಅಸಲಾಗಿ ಪರಿಗಣಿಸಲಾಗುತ್ತದೆ.

ಪತ್ನಿ = $^1/_8$ X8 = 1X3=3

ಮಗ<br>ಮಗಳು } = ಉಳಿಕೆ 7 X 3 = 21

ತಸ್‌ಹೀಹ್‌ನ ಬಳಿಕ 8X3 = 24

ಪತ್ನಿ = $^{3}/_{24}$

ಮಗ = $^{14}/_{24}$

ಮಗಳು = $^{7}/_{24}$

ಎರಡೂ ಸಂಖ್ಯೆಯನ್ನು ಶೇಷವಿಲ್ಲದೆ ಭಾಗಿಸಬಹುದಾದ ಸಾಮಾನ್ಯ ಅಂಶವಿದ್ದರೆ, ಸಾಮಾನ್ಯ ಅಂಶವನ್ನು ಜನರ ಸಂಖ್ಯೆಯಿಂದ ಭಾಗಿಸಿ ಭಾಗಲಬ್ಧಿಯಿಂದ ಅಸಲುಲ್ ಮಸ್‌ಅಲಃವನ್ನು ಗುಣಿಸಬೇಕು. ಉದಾ: ಮೃತನಿಗೆ 8 ಹೆಣ್ಮಕ್ಕಳು, ತಾಯಿ ಮತ್ತು ಪಿತೃ ಸಹೋದರ ಹಕ್ಕುದಾರರಾಗಿದ್ದರೆ ಹೆಣ್ಮಕ್ಕಳಿಗೆ $^{2}/_{3}$ ಮತ್ತು ತಾಯಿಗೆ $^{1}/_{6}$ ಉಳಿದದ್ದು ಪಿತೃ ಸಹೋದರನಿಗೆ ನೀಡಬೇಕು. ಆದ್ದರಿಂದ ಅಸಲುಲ್ ಮಸ್‌ಅಲಃ 6.

ತಸ್‌ಹೀಹ್‌ನ ಬಳಿಕ = 12

8 ಹೆಣ್ಮಕ್ಕಳು $^{2}/_{3}$ X 6 = 4x2 = 8

ತಾಯಿ $^{1}/_{6}$ x 6 = 1X 2 = 2

ಪಿತೃ ಸಹೋದರ = ಉಳಿದದ್ದು = 1X 2 = 2

6 X 2 = 12

ಇಲ್ಲಿ ತಸ್‌ಹೀಹ್‌ಗಾಗಿ ಎಂಟು ಮತ್ತು 4ರ ಸಾಮಾನ್ಯ ಅಂಶವಾಗಿರುವ 4ರಿಂದ 8ನ್ನು ಭಾಗಿಸಲಾಯಿತು. ಭಾಗಲಬ್ಧ ಎರಡರಿಂದ ಅಸಲುಲ್ ಮಸ್‌ಅಲಃ (6)ನ್ನು ಗುಣಿಸಲಾಯಿತು.

8 ÷ 4 = 2

2 X 6 = 12

ಇನ್ನು ಅಸಲುಲ್ ಮಸ್‌ಅಲಃದಂತೆ ದೊರೆತ ಪಾಲನ್ನು ಸರಿಯಾಗಿ ಹಂಚಿಕೊಳ್ಳಲು ಸಾಧ್ಯವಾಗದ ಪಾಲುದಾರರು ಒಂದಕ್ಕಿಂತ ಅಧಿಕ ವರ್ಗವಿದ್ದರೆ ಪ್ರತಿಯೊಂದು ವರ್ಗದಲ್ಲಿರುವ ಜನರ ಸಂಖ್ಯೆಯನ್ನು ನೋಡಬೇಕು. ಒಂದು ವರ್ಗದಲ್ಲಿರುವಷ್ಟೇ ಜನರು ಇನ್ನೊಂದು ವರ್ಗದಲ್ಲಿಯೂ ಇದ್ದರೆ, ಒಂದು ವರ್ಗದ ಜನರ ಸಂಖ್ಯೆಯಿಂದ 'ಅಸಲುಲ್ ಮಸ್‌ಅಲಃ'ವನ್ನು ಗುಣಿಸಬೇಕು. ಉದಾ: ಮೃತನಿಗೆ ಐದು ಹೆಣ್ಮಕ್ಕಳು ಮತ್ತು 5 ಸ್ವಂತ ಸಹೋದರಿಯರು ಹಕ್ಕುದಾರರಾಗಿದ್ದರೆ ಹೆಣ್ಮಕ್ಕಳಿಗೆ $^{2}/_{3}$ ಮತ್ತು ಸಹೋದರಿಯರಿಗೆ ಬಾಕಿ ಉಳಿದ $^{1}/_{3}$ ದೊರೆಯುತ್ತದೆ. ತಮಗೆ ದೊರೆತ ಈ 2 ಪಾಲನ್ನು ಐದು ಹೆಣ್ಮಕ್ಕಳಿಗೂ ಒಂದು ಪಾಲನ್ನು ಐವರು ಸಹೋದರಿಯರಿಗೂ ಕೂಡಲೇ ಹಂಚಲು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ತಸ್‌ಹೀಹ್ ಅಗತ್ಯವಿದೆ. ಹೆಣ್ಣು ಮಕ್ಕಳ ಮತ್ತು ಸಹೋದರಿಯ ಸಂಖ್ಯೆಯು ಐದೇ ಆಗಿರುವುದರಿಂದ ಐದರಿಂದ 'ಅಸಲುಲ್ ಮಸ್‌ಅಲಃ' ಆಗಿರುವ ಮೂರನ್ನು ಗುಣಿಸಿದರೆ ಸಾಕು.

ಅಸಲುಲ್ ಮಸ್‌ಅಲಃ = 3

ತಸ್‌ಹೀಹ್‌ನ ಬಳಿಕ = 15

5 ಹೆಣ್ಮಕ್ಕಳು $^{2}/_{3} \times 3 = 2 \times 5 = 10$

5 ಸಹೋದರಿಯರು: ಉಳಿದದ್ದು = $1 \times 5 = 5$

$3 \times 5 = 15$

ಮಕ್ಕಳಲ್ಲಿ ಪ್ರತಿಯೊಬ್ಬರಿಗೂ 2 ಪಾಲು ಮತ್ತು ಸಹೋದರಿಯರಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಪಾಲು ದೊರೆಯುತ್ತದೆ.

ಇನ್ನು ಪ್ರಸ್ತುತ ವರ್ಗದವರ ಸಂಖ್ಯೆಯು ಸಮಾನವಾಗಿದ್ದರೆ ಕೆಳಗೆ ಹೇಳಿದ ರೀತಿಯಲ್ಲಿ ತಸ್‌ಹೀಹ್ ಮಾಡಬಹುದು. ಪಾಲುದಾರರ ಸಂಖ್ಯೆಗಳಲ್ಲಿ ಒಂದು ಇನ್ನೊಂದರ ಗುಣಕವಾಗಿದ್ದರೆ ದೊಡ್ಡ ಸಂಖ್ಯೆಯಿಂದ ಅಸಲುಲ್ ಮಸ್‌ಅಲಃವನ್ನು ಗುಣಿಸಬೇಕು. ಒಂದು ಇನ್ನೊಂದರ ಗುಣಕವಲ್ಲದಿದ್ದರೆ ಎರಡನ್ನೂ ಸಂಪೂರ್ಣ ಭಾಗಿಸಬಹುದಾದ ಸಾಮಾನ್ಯ ಭಾಜಕವಿದ್ದರೆ ಒಂದು ವರ್ಗದ ಸಂಖ್ಯೆಯನ್ನು ಸಾಮಾನ್ಯ ಭಾಜಕದಿಂದ ಭಾಗಿಸಿ ಭಾಗಲಬ್ಧಿಯಿಂದ ಇನ್ನೊಂದು ವರ್ಗದ ಸಂಖ್ಯೆಯನ್ನು ಗುಣಿಸಿದ ಬಳಿಕ ಗುಣಲಬ್ಧದಿಂದ ಅಸಲುಲ್ ಮಸ್‌ಅಲಃವನ್ನು ಗುಣಿಸಬೇಕು. ಒಂದು ಇನ್ನೊಂದರ ಗುಣಕವಲ್ಲ, ಎರಡಕ್ಕೂ ಸಮಾನ ಭಾಜಕವಿಲ್ಲದಿದ್ದರೆ ಒಂದು ಸಂಖ್ಯೆಯನ್ನು ಇನ್ನೊಂದು ಸಂಖ್ಯೆಯಿಂದ ಗುಣಿಸಿ ಗುಣಲಬ್ಧಿಯಿಂದ ಅಸಲುಲ್ ಮಸ್‌ಅಲಃವನ್ನು ಪುನಃ ಗುಣಿಸಬೇಕು.

## ಔಲ್

ಸೊತ್ತಿನಲ್ಲಿ ಹಕ್ಕುದಾರರಿಗಿರುವ ಪಾಲುಗಳನ್ನು ಒಟ್ಟಿಗೆ ಸೇರಿಸಿದಾಗ ದೊರೆಯುವ ಸಂಖ್ಯೆಗಿಂತ ಅಸಲುಲ್ ಮಸ್‌ಅಲಃದ ಸಂಖ್ಯೆಯು ಕಡಿಮೆಯಾಗಿದ್ದರೆ ಅಸಲುಲ್ ಮಸ್‌ಅಲಃವನ್ನು ಪಾಲುಗಳ ಸಂಖ್ಯೆಗೆ ಸಮಾನಗೊಳಿಸುವುದನ್ನು 'ಔಲ್' ಎನ್ನಲಾಗುತ್ತದೆ. ಉದಾ: ಸ್ತ್ರೀ ಮೃತಳಾದಳು. ಹಕ್ಕುದಾರರು: ಪತಿ, ತಾಯಿ, ಸ್ವಂತ ಸಹೋದರಿ, ತಂದೆ ಒಂದೇ ಆಗಿರುವ ಸಹೋದರಿ. ಪತಿಗೆ $^{1}/_{2}$, ತಾಯಿ $^{1}/_{6}$, ಪೂರ್ಣ ಸಹೋದರಿ $^{1}/_{2}$, ತಂದೆ ಒಂದೇ ಆಗಿರುವ ಸಹೋದರಿ $^{1}/_{6}$, ಅಸಲುಲ್ ಮಸ್‌ಅಲಃ 6. ಪತಿಯ $^{1}/_{2}$ ಮತ್ತು ಸಹೋದರಿಯ $^{1}/_{6}$ ನೀಡಿದರೆ ತಾಯಿಯ $^{1}/_{6}$ ಮತ್ತು ತಂದೆ ಒಂದೇ ಆಗಿರುವ ಸಹೋದರಿಯ $^{1}/_{6}$ ನೀಡಲು ಸಾಧ್ಯವಿಲ್ಲ. ಆದ್ದರಿಂದ ಅವರಿಗೂ ಪಾಲು ದೊರೆಯುವ ರೀತಿಯಲ್ಲಿ ಮೂಲ ಛೇದ ಸಂಖ್ಯೆ (ಅಸಲುಲ್ ಮಸ್‌ಅಲಃ)ಯನ್ನು 6ರಿಂದ 8ಕ್ಕೆ ಏರಿಸ ಲಾಗುವುದು. 6ರ ಅನುಪಾತದಲ್ಲಿ ಪ್ರತಿಯೊಬ್ಬರಿಗೂ ಪಾಲಾಗುವುದು. ಅರ್ಥಾತ್ ತಾಯಿಯ $^{1}/_{6}$ ತಂದೆ ಒಂದೇ ಆಗಿರುವ ಸಹೋದರಿಯ $^{1}/_{6}$ ಎಂಬಿವುಗಳನ್ನು ಪ್ರತಿಯೊಂದು $^{1}/_{8}$ ಎಂದೂ ಪತಿಯ $^{3}/_{6}$ ಮತ್ತು ಸ್ವಂತ ಸಹೋದರಿಯ $^{3}/_{6}$ನ್ನು $^{3}/_{8}$ರಂತೆ ನೀಡಲಾಗುವುದು. 6, 12, 24 ಎಂಬೀ ಸಂಖ್ಯೆಗಳು ಅಸಲುಲ್ ಮಸ್‌ಅಲಃ ಆಗುವ ಸಂದರ್ಭದಲ್ಲಿ ಮಾತ್ರ ಔಲ್ ಬರುತ್ತದೆ. 2, 3, 4, 8 ಇವುಗಳಿಗೆ ಔಲ್ ಅನ್ವಯವಾಗುವುದಿಲ್ಲ. ಔಲ್ ಅನ್ವಯ

ವಾಗುವ ವಾರೀಸು ಹಕ್ಕು ವಿವಾದವು ಪ್ರಥಮವಾಗಿ ಖಲೀಫಾ ಉಮರ್‌ರ ಆಡಳಿತ ಕಾಲದಲ್ಲಿ ಉದ್ಭವಿಸಿತು. ಅವರು ಸಹಾಬಿಗಳ ಜತೆ ಸಮಾಲೋಚನೆ ನಡೆಸಿದರು. ಆಗ ಔಲ್ ಮಾಡಿಕೊಡಬೇಕೆಂದು ಝೈದ್ ಬಿನ್ ಸಾಬಿತ್ ಹೇಳಿದರು. ಜಾಗ್ರತೆಗೆ ಅದೇ ಉತ್ತಮವೆಂದು ಅಭಿಪ್ರಾಯಪಟ್ಟ ಉಮರ್‌ರು ಔಲ್ ಮಾಡಿ ಸೊತ್ತು ವಿಭಜಿಸುವಂತೆ ಆಜ್ಞಾಪಿಸಿದರು. ಈ ಅಭಿಪ್ರಾಯವನ್ನು ಸಹಾಬಿಗಳು ಅಂಗೀಕರಿಸಿದರು. ಆ ಪ್ರಕಾರ ಅದು ಇಜ್ಮಾಅ್ (ಸರ್ವಾನುಮತ) ಆಯಿತು.

## ರದ್ದ್

ಹಕ್ಕುದಾರರ ನಿರ್ಣಿತ ಪಾಲು ಕಳೆದು ಉಳಿದುದನ್ನು ಅರ್ಹರಾದ ಅಸ್ವಬಃಗಳಿಲ್ಲದಿದ್ದರೆ ಅದನ್ನು ನಿರ್ದಿಷ್ಟ ಪಾಲುದಾರರಿಗೆ ಪ್ರತಿಯೊಬ್ಬರ ಹಕ್ಕಿನ ಅನುಪಾತದಲ್ಲಿ ಹಂಚಲಾಗುತ್ತದೆ. ಇದನ್ನು ಪಾರಿಭಾಷಿಕದಲ್ಲಿ ರದ್ದ್ ಎಂದು ಕರೆಯುತ್ತಾರೆ. ಆದರೆ ನಿರ್ಣಿತ ಪಾಲುದಾರರಲ್ಲಿ ಪತಿಪತ್ನಿಯರು ರದ್ದ್‌ಗೆ ಅರ್ಹರಲ್ಲ. ಎಂಟು ವರ್ಗದವರಿಗೆ ರದ್ದ್ ಅನ್ವಯವಾಗುತ್ತದೆ. ಪುರುಷರಲ್ಲಿ ತಾಯಿ ಒಂದೇ ಆಗಿರುವ ಸಹೋದರ ಮಾತ್ರ ಅದರಲ್ಲಿ ಸೇರಿದ್ದಾರೆ. ಉಳಿದ 7 ವರ್ಗಗಳು ಸ್ತ್ರೀಯರು: ಮಗಳು, ಮಗನ ಮಗಳು, ಸ್ವಂತ ಸಹೋದರಿ, ತಂದೆ ಒಂದೇ ಆಗಿರುವ ಸಹೋದರಿ, ತಾಯಿ ಒಂದೇ ಆಗಿರುವ ಸಹೋದರಿ, ತಾಯಿ ಮತ್ತು ತಾಯಿಯ ತಾಯಿ.

ಆದರೆ, ಮಿಗತೆ ಧನವನ್ನು ನಿರ್ಣಿತ ಪಾಲುದಾರರಿಗೆ ನೀಡಬಾರದು, ಅದನ್ನು ಮುಸ್ಲಿಮರ ಸಾರ್ವಜನಿಕ ಬೊಕ್ಕಸಕ್ಕೆ ಸೇರಿಸಬೇಕೆಂದು ಪ್ರಸಿದ್ಧ ಸಹಾಬಿ ಝೈದ್ ಬಿನ್ ಸಾಬಿತ್‌ರ ಅಭಿಮತ. ಹೆಚ್ಚಿನ ಸಹಾಬಿಗಳು ಮತ್ತು ತಾಬಿಈಗಳು ಅದನ್ನು ಪತಿ ಪತ್ನಿಯರ ಹೊರತು ಇತರ ನಿರ್ಣಿತ ಪಾಲುದಾರರಿಗೆ ನೀಡಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.

ನಿಶ್ಚಿತ ಪಾಲುಗಳ ಒಟ್ಟು ಮೊತ್ತವಾಗಿರುವ ಅಸಲುಲ್ ಮಸ್‌ಅಲಃವನ್ನು ರದ್ದ್‌ನ ಪರಿಸ್ಥಿತಿಯಲ್ಲಿ ಕಿರಿದುಗೊಳಿಸಬೇಕು. ಅದರಿಂದಾಗಿ ಪ್ರತಿಯೊಂದು ಪಾಲಿನ ಮೌಲ್ಯವು ಹೆಚ್ಚುತ್ತದೆ. ಉದಾ: ಪಾಲು $^1/_6$ ಇದ್ದರೆ ಮೂಲಛೇದ ಸಂಖ್ಯೆಯು 6 ಆಗಿರುತ್ತದೆ. ಅದನ್ನು ನಾಲ್ಕು ಎಂದು ಮಾಡಿದರೆ $^1/_6$ ಎಂಬುದು $^1/_4$ ಆಗುತ್ತದೆ.

'ರದ್ದ್'ಗೆ ಸಂಬಂಧಿಸಿದ ಸಮಸ್ಯೆಯಲ್ಲಿ- ಪತಿ ಪತ್ನಿಯರಲ್ಲಿ ಯಾರಾದರೊಬ್ಬರು ಇರುವ ಮತ್ತು ಯಾರೂ ಇಲ್ಲದ ಎರಡು ಸ್ಥಿತಿಗಳಿವೆ.

1. **ಪತಿ-ಪತ್ನಿಯರ ಪೈಕಿ ಒಬ್ಬರು ಸೇರಿರುವ ರದ್ದ್‌ನ ಕ್ರಮ:** ಇದರಲ್ಲಿ ರದ್ದ್‌ಗೆ ಅರ್ಹರಾದವರ ಪಾಲುಗಳು ಒಂದೇ ವರ್ಗದ ಛೇದದಿಂದ ಅಥವಾ 2 ರೀತಿಯ ಛೇದದಿಂದ ಆಗಬಹುದು. ಕೆಲವೊಮ್ಮೆ ಅದರಲ್ಲಿ ಹೆಚ್ಚಿನ ಛೇದದಿಂದಾಗಿರಲೂಬಹುದು. ಒಂದೇ ಛೇದದಲ್ಲಿರುವ ಪಾಲೆಂದಾದರೆ ಪತಿಯ ಅಥವಾ ಪತ್ನಿಯ ಪಾಲಿನ ಛೇದವನ್ನು ಅಸಲುಲ್ ಮಸ್‌ಅಲಃವಾಗಿ ಪರಿಗಣಿಸಲಾಗುವುದು. ಆತನ ಪಾಲು ನೀಡಿದ ಬಳಿಕ ಉಳಿದ ಸೊತ್ತನ್ನು ಇತರರ ಸಂಖ್ಯೆಯನ್ನು ನೋಡಿ ವಿಭಜಿಸಲಾಗುವುದು. ಆ ಪ್ರಕಾರ

ಪಾಲು ಸರಿಯಾದರೆ ಅದೇ ಪ್ರಕಾರ. ಅನ್ಯಥಾ ಜನರ ಸಂಖ್ಯೆ ಮತ್ತು ಅವರ ಪಾಲಿನ ಛೇದವನ್ನು ಕಂಡು ಹಿಡಿದ ಬೇರೊಂದು ಸಂಖ್ಯೆಯಿಂದ ಎರಡರ ಭಾಗಹಾರ ಸಾಧ್ಯವಿಲ್ಲದಿದ್ದರೆ ಸಾಮಾನ್ಯ ಭಾಜಕದಿಂದ ಪಾಲುದಾರರ ಸಂಖ್ಯೆಯನ್ನು ಭಾಗಿಸಿ ಭಾಗಲಬ್ಧಿಯಿಂದ ಅಸಲುಲ್ ಮಸ್‌ಅಲಃವನ್ನು ಗುಣಿಸಬೇಕು. ಮೂರನೆಯ ಬೇರೊಂದು ಸಂಖ್ಯೆಯಿಂದ ಭಾಗಿಸಿದರೆ ಶೇಷ ಉಳಿಯುವ ರೀತಿಯಲ್ಲಿರುವ ಸಂಖ್ಯೆಗಳಾಗಿದ್ದರೆ ಅಸಲುಲ್ ಮಸ್‌ಅಲಃವನ್ನು ಗುಣಿಸಬೇಕು.

ಉದಾ: 1. ಮೃತ ಪುರುಷನಿಗೆ ಪತ್ನಿ ಮತ್ತು ಮೂವರು ಸ್ವಂತ ಸಹೋದರಿಯರಿದ್ದಾರೆಂದು ಭಾವಿಸೋಣ. ಪತ್ನಿಗೆ $^1/_4$, ಸಹೋದರಿಯರಿಗೆ $^2/_3$. ಅಸಲುಲ್ ಮಸ್‌ಅಲಃ 12. $^1/_4$=3, $^2/_3$=$^8/_{12}$. ಶೇಷ $^1/_{12}$, ಈ $^1/_{12}$ ಭಾಗವನ್ನು ಸಹೋದರಿಯರಿಗೆ ರದ್ದುಗೊಳಿಸಿ ನೀಡಲು ಪತ್ನಿಯ ಪಾಲಿನ ಛೇದದ 4ನ್ನು ಅಸಲುಲ್ ಮಸ್‌ಅಲಃಗೊಳಿಸಲಾಗುತ್ತದೆ. ಪತ್ನಿಗೆ $^1/_4$, ಮೂವರು ಸಹೋದರಿಯರಲ್ಲಿ ಪ್ರತಿಯೋರ್ವರಿಗೂ ತಲಾ $^1/_4$. ಹೀಗೆ ಸೊತ್ತನ್ನು ವಿಭಜಿಸಬೇಕು.

ಉದಾ: 2. ಮೃತ ಪತ್ನಿಗೆ ಪತಿ ಮತ್ತು ಮಗನ 6 ಪುತ್ರಿಯರು ಹಕ್ಕುದಾರರಾಗಿದ್ದಾರೆ. ಪತಿಗೆ $^1/_4$ ಮಗನ ಪುತ್ರಿಯರಿಗೆ $^2/_3$. ಇಲ್ಲಿ ಅಸಲುಲ್ ಮಸ್‌ಅಲಃ 12,$^1/_4$= 3, $^2/_3$=$^8/_{12}$ ಒಟ್ಟು $^{11}/_{12}$. ಶೇಷ $^1/_{12}$. ಅದನ್ನು ಪತ್ನಿಯರಿಗೆ ರದ್ದ್ ಮಾಡಿ ನೀಡಲು ಅಸಲುಲ್ ಮಸ್‌ಅಲಃವನ್ನು 12ರ ಬದಲಿಗೆ ಪತಿಯ ಪಾಲಿನ ಛೇದವಾಗಿರುವ 4 ಆಗಿ ಬದಲಿಸಲಾಗುವುದು. ಅದರಿಂದ ಪತಿಯ $^1/_4$ ಕೊಟ್ಟರೆ ಬಾಕಿ $^3/_4$. ಇದನ್ನು 6 ಪತ್ನಿಯರಿಗೆ ಪೂರ್ಣಾಂಕವಾಗಿ ಹಂಚಲು ಸಾಧ್ಯವಿಲ್ಲ. ಇಲ್ಲಿ ಪುತ್ರಿಯರ ಸಂಖ್ಯೆಯಾಗಿರುವ 6 ಮತ್ತು ಅವರ ಪಾಲು ಆಗಿರುವ ಮೂರರ ಸಾಮಾನ್ಯ ಭಾಜಕವಾಗಿರುವ ಮೂರರಿಂದ ಜನರ ಸಂಖ್ಯೆಯನ್ನು (ಆರು) ಭಾಗಿಸಿ ಭಾಗಲಬ್ಧ (ಎರಡು)ದಿಂದ ಅಸಲುಲ್ ಮಸ್‌ಅಲಃವಾಗಿರುವ 4ನ್ನು ಗುಣಿಸಬೇಕು. 4X2=8 ಪತಿಯ $^1/_4$, ಎಂಟರಿಂದಾಗುವಾಗ $^2/_8$ ಆಗುತ್ತದೆ. ಉಳಿದುದನ್ನು ಪುತ್ರಿಯರಿಗೆ $^1/_8$ ಎಂಬ ಪ್ರಕಾರ ನೀಡಲಾಗುತ್ತದೆ.

ಉದಾ: 3. ಪತಿ ಮತ್ತು ಮಗನ ಐವರು ಪುತ್ರಿಯರು ಹಕ್ಕುದಾರರಾಗಿರುವಾಗ ಅವರ ಪಾಲು ಯಥಾ ಕ್ರಮ $^1/_4$, $^2/_3$ ಆಗಿರುತ್ತದೆ. ರದ್ದ್ ಮಾಡುವಾಗ ಅಸಲುಲ್ ಮಸ್‌ಅಲಃ 4 ಆಗಿರುವುದು. ಪತಿಯ ಪಾಲನ್ನು ಕಳೆದು ಉಳಿಯುವ $^3/_4$ ಭಾಗವನ್ನು ಪುತ್ರಿಯರಲ್ಲಿ ಐದು ಮಂದಿಗೂ ಸರಿಯಾಗಿ ವಿತರಿಸಲು ಸಾಧ್ಯವಿಲ್ಲ. ಆದ್ದರಿಂದ ಪುತ್ರಿಯರ ಸಂಖ್ಯೆಯಾಗಿರುವ ಐದನ್ನು ರದ್ದ್‌ನ ಬಳಿಕದ ಅಸಲುಲ್ ಮಸ್‌ಅಲಃವಾಗಿರುವ ನಾಲ್ಕರಲ್ಲಿ ಗುಣಿಸಲಾಗುತ್ತದೆ- 4X5=20. ಪತಿಯ $^1/_4$=$^5/_{20}$ ಆಗಿದೆ. ಉಳಿಯುವ $^{15}/_{20}$ ಭಾಗವನ್ನು ಪುತ್ರಿಯರಲ್ಲಿ ಪ್ರತಿಯೊಬ್ಬರಿಗೂ $^3/_{15}$ ಪ್ರಕಾರ ಹಂಚಬಹುದು.

2. ಪತಿ ಪತ್ನಿಯರು ಯಾರೂ ಇಲ್ಲದ ರದ್ದ್‌ನ ಕ್ರಮ:

(i) ಈರ್ವರು ಪುತ್ರಿಯರು ಮಾತ್ರ ಹಕ್ಕುದಾರರಾಗಿದ್ದರೆ ಅವರ ನೈಜ ಪಾಲು $^2/_3$ ಆಗಿರುತ್ತದೆ. ಅವರ ಸಂಖ್ಯೆಯು 2 ಆಗಿರುವುದರಿಂದ ಅಸಲುಲ್ ಮಸ್‌ಅಲಃವೂ

ಎರಡೇ ಆಗಿರುವುದು. ಅವರ ಸಂಖ್ಯೆಯು ಹೆಚ್ಚಿದಂತೆಯೇ ಅಸಲುಲ್ ಮಸ್‌ಅಲಃವೂ ಹೆಚ್ಚುತ್ತದೆ. ಸಂಖ್ಯೆಯು ಐದಾಗಿದ್ದರೆ ಐದು. ಎಂಟಾಗಿದ್ದರೆ ಎಂಟು.

(ii) ಸ್ವಂತ ಸಹೋದರಿ ಮತ್ತು ಅಜ್ಜಿಯಿದ್ದರೆ ಸಹೋದರಿಗೆ $^1/_2$, ಅಜ್ಜಿಗೆ $^1/_6$, ಅಸಲುಲ್ ಮಸ್‌ಅಲಃ 6. ಈರ್ವರ ಪಾಲನ್ನೂ ನೀಡಿದರೆ ಉಳಿಕೆ 2. ಅದನ್ನು ರದ್ದ್‌ಗೊಳಿಸಲಿಕ್ಕಾಗಿ ಅಸಲುಲ್ ಮಸ್‌ಅಲಃವನ್ನು ಈರ್ವರ ಪಾಲುಗಳ ಒಟ್ಟು ಮೊತ್ತವಾಗಿರುವ 4 ಎಂದು ಪರಿಗಣಿಸಲಾಗುವುದು. $^1/_4$ ಅಜ್ಜಿಗೂ $^3/_4$ ಭಾಗವನ್ನು ಸಹೋದರಿಗೂ ನೀಡಲಾಗುವುದು.

## ಹಕ್ಕಿಲ್ಲದ ಕುಟುಂಬಿಕರು: ದವುಲ್ ಅರ್ಹಾಮ್

ನಿರ್ದಿಷ್ಟ ಪಾಲಿಲ್ಲದವರು ಮತ್ತು ಅಸ್ಬಃರಲ್ಲದ ಮೃತ ವ್ಯಕ್ತಿಯ ಹತ್ತಿರದ ಕುಟುಂಬಕ್ಕೆ ಸೇರಿದವರನ್ನು 'ದವುಲ್ ಅರ್ಹಾಮ್' ಎನ್ನಲಾಗುತ್ತದೆ. ಹಕ್ಕುದಾರರು ಯಾರೂ ಇಲ್ಲದಿದ್ದರೆ ದವುಲ್ ಅರ್ಹಾಮ್‌ರಿಗೆ ಹಕ್ಕನ್ನು ನೀಡಬಹುದೇ ಎಂಬ ವಿಷಯದಲ್ಲಿ ವಿದ್ವಾಂಸರು ಭಿನ್ನಾಭಿಪ್ರಾಯ ಹೊಂದಿದ್ದಾರೆ. ಅವರಿಗೆ ಹಕ್ಕು ನೀಡಬಾರದೆಂದು ಹೇಳುವವರು, ಸೊತ್ತನ್ನು ಮುಸ್ಲಿಮರ ಸಾರ್ವಜನಿಕ ಬೊಕ್ಕಸಕ್ಕೆ ಸೇರಿಸಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ.

ದವುಲ್ ಅರ್ಹಾಮ್‌ರಿಗೆ ನೀಡಬಹುದೆಂದು ಹೇಳುವವರಲ್ಲಿಯೂ 2 ದೃಷ್ಟಿಕೋನಗಳಿವೆ. ಒಂದು ವರ್ಗವು ಅವರಲ್ಲಿ ಭಿನ್ನತೆ ಕಲ್ಪಿಸ ಬೇಕಾಗಿಲ್ಲವೆಂದು ಹೇಳುತ್ತದೆ. ಇನ್ನೊಂದು ವರ್ಗದ ದೃಷ್ಟಿಕೋನದಂತೆ, ನಿರ್ಣಿತ ಪಾಲುದಾರರಂತೆಯೇ ದವುಲ್ ಅರ್ಹಾಮ್‌ನಲ್ಲಿ ದಾಯಕನೊಂದಿಗೆ ಹೆಚ್ಚು ಹತ್ತಿರದವರನ್ನು ಪರಿಗಣಿಸಬೇಕು. ಅವರಲ್ಲಿಯೂ ದಾಯಕನೊಂದಿಗಿನ ನಿಕಟತೆಯ ಸ್ಥಾನವನ್ನು ಪರಿಗಣಿಸಬೇಕೆಂದು ಹೇಳುವವರೂ ಇದ್ದಾರೆ.

## ದವುಲ್ ಅರ್ಹಾಮ್‌ನ ವಿಭಾಗಗಳು

**ದವುಲ್ ಅರ್ಹಾಮ್‌ನಲ್ಲಿ 4 ವರ್ಗವಿದೆ-** 1. ದಾಯಕನ ಸಂತಾನ ಪರಂಪರೆಗೆ ಸೇರಿದವರು. ಹೆಣ್ಣು ಮಕ್ಕಳ ಮಕ್ಕಳು ಮತ್ತು ಮಗನ ಪುತ್ರಿಯರ ಮಕ್ಕಳು ಅದರಲ್ಲಿ ಸೇರುತ್ತಾರೆ. 2. ದಾಯಕನ ತಾಯಿಯ ಪರಂಪರೆಗೆ ಸೇರಿದವರು. ಇದರಲ್ಲಿ ದಾಯಕನ ತಾಯಿಯ ತಂದೆ, ತಾಯಿಯ ತಂದೆಯ ತಂದೆಯರು ಮುಂತಾದ ಅಜ್ಜಂದಿರು, ದಾಯಕನ ತಾಯಿಯ ತಂದೆಯ ತಾಯಿ, ತಾಯಿಯ ತಂದೆಯ ತಾಯಿಯ ತಾಯಿ ಮುಂತಾದ ಅಜ್ಜಿಯಂದಿರು ಸೇರುತ್ತಾರೆ. 3. ದಾಯಕನ ಮಾತಾಪಿತರ ಸಂತಾನ ಪರಂಪರೆಯಲ್ಲಿರುವವರು. ಇದರಲ್ಲಿ ಸಹೋದರಿಯರ ಸಂತಾನಗಳು, ಸಹೋದರರ ಹೆಣ್ಣು ಸಂತಾನಗಳು, ತಾಯಿ ಒಂದೇ ಆಗಿರುವ ಸಹೋದರರ ಸಂತಾನಗಳು ಮುಂತಾದವರು ಸೇರಿದ್ದಾರೆ. 4. ದಾಯಕನ ಅಜ್ಜ ಮತ್ತು ಅಜ್ಜಿಯರ ಸಂತಾನಗಳಲ್ಲಿ ಸೇರಿದವರು. ಇದರಲ್ಲಿ ದಾಯಕನ ಪಿತೃ ಸಹೋದರಿಯರೂ ಕೇವಲ ತಂದೆ ಒಂದೇ ಆಗಿರುವ ಪಿತೃ ಸಹೋದರರೂ ಮಾತೃ ಸಹೋದರ ಸಹೋದರಿಯರೂ ಸೇರುತ್ತಾರೆ.

## ಗರ್ಭಸ್ಥ ಶಿಶುವಿನ ಹಕ್ಕು

ಗರ್ಭಸ್ಥ ಶಿಶುವಿಗೆ ದಾಯಧನದಲ್ಲಿ ಹಕ್ಕು ದೊರೆಯಲಿರುವ ನಿಬಂಧನೆಗಳು ಎರಡು- ಒಂದು ದಾಯಕನ ಮರಣ ವೇಳೆಯಲ್ಲಿ ಗರ್ಭವಿದೆಯೆಂದು ದೃಢವಾಗಬೇಕು. ಎರಡು, ಗರ್ಭಸ್ಥ ಶಿಶುವನ್ನು ಜೀವಂತ ಹೆರಬೇಕು. ಹಾಗಿದ್ದರೂ ದಾಯಧನವನ್ನು ಹಕ್ಕುಗಳ ಮಧ್ಯೆ ಹಂಚಲು ಗರ್ಭದಲ್ಲಿರುವ ಮಗುವಿನ ಜನನದ ತನಕ ಕಾಯಬೇಕಾಗಿಲ್ಲ. ಹಕ್ಕುದಾರರ ಹಿತಾಸಕ್ತಿಯನ್ನು ಗಮನದಲ್ಲಿರಿಸಿ ಗರ್ಭಸ್ಥ ಶಿಶುವಾಗಿರುವುದನ್ನು ಬೇರ್ಪಡಿಸಿ ಉಳಿದುದನ್ನು ಇತರ ಹಕ್ಕುದಾರರಿಗೆ ನೀಡಬೇಕೆಂಬುದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಗರ್ಭಸ್ಥ ಶಿಶುವಿನಿಂದಾಗಿ ಇತರ ಹಕ್ಕುದಾರರ ಹಕ್ಕು ನಿಷೇಧಿಸಲ್ಪಡುವ ಸಾಧ್ಯತೆಯಿದ್ದರೆ ಜನನದ ತನಕ ಸೊತ್ತು ಪಾಲು ಮಾಡುವುದನ್ನು ಸ್ಥಗಿತಗೊಳಿಸಬೇಕು. ಪತ್ನಿ, ಸಹೋದರ ಸಹೋದರಿಯರಿರುವ ಓರ್ವರು, ಪತ್ನಿ ಗರ್ಭಿಣಿಯಾಗಿರುವಾಗ ಮೃತರಾದರೆಂದು ಭಾವಿಸೋಣ. ಪತ್ನಿಯ ಹೊರತು ಸಹೋದರ ಸಹೋದರಿಯರು ಮಾತ್ರ ಹಕ್ಕುದಾರರಾಗಿದ್ದಾರೆ. ಆದರೆ ಗಂಡು ಮಗು ಹುಟ್ಟಿದರೆ ಸಹೋದರ ಸಹೋದರಿಯರಿಗೆ ಹಕ್ಕಿರುವುದಿಲ್ಲ. ಇಂಥ ಸಂದರ್ಭಗಳಲ್ಲಿ ಪಾಲು ಮಾಡುವುದನ್ನು ಸೂಕ್ತ ಸಮಯದ ತನಕ ಮುಂದೂಡಬೇಕು. ಮೇಲೆ ಹೇಳಿದ ಸಮಸ್ಯೆಗಳಿಲ್ಲದ ಸಂದರ್ಭಗಳಲ್ಲಿ ಗರ್ಭಸ್ಥ ಶಿಶುವಿನ ಜನನಕ್ಕಿಂತ ಮುಂಚೆಯೇ ಈ ಕೆಳಗಿನ ನಿಬಂಧನೆಗೆ ಬದ್ಧವಾಗಿ ಸೊತ್ತು ಪಾಲು ಮಾಡಬಹುದು-

1. ಗರ್ಭಸ್ಥ ಶಿಶು ಗಂಡಾದರೆ ದೊರೆಯಬೇಕಾದ ಪಾಲು ಮತ್ತು ಹೆಣ್ಣಾದರೆ ದೊರೆಯಬೇಕಾದ ಪಾಲು ಭಿನ್ನವಾಗಿದ್ದರೆ ಅಧಿಕವಿರುವ ಪಾಲನ್ನು ಗರ್ಭಸ್ಥ ಶಿಶುವಿಗಾಗಿ ಕಾದಿರಿಸಬೇಕು.

2. ಹುಟ್ಟುವ ಮಗುವು ಗಂಡಾಗಿದ್ದರೆ ಪಾಲು ದೊರೆಯುವುದಿಲ್ಲ. ಹೆಣ್ಣಾದರೆ ಪಾಲು ದೊರೆಯ ಬಹುದೆಂಬ ಸ್ಥಿತಿಯಿದ್ದರೆ ಪಾಲು ದೊರೆಯುವ ವ್ಯಕ್ತಿಯ ಪಾಲನ್ನು ತೆಗೆದಿರಿಸಬೇಕು. ಉದಾ: ಪತಿ, ಪೂರ್ಣ ಸಹೋದರಿ, ತಂದೆಯ ಗರ್ಭಿಣಿಯಾಗಿರುವ ಎರಡನೇ ಪತ್ನಿ ಮುಂತಾದವರು ಬದುಕಿರುವಾಗ ಓರ್ವ ಮಹಿಳೆಯು ಮೃತಳಾಗು ವಳೆಂದು ಭಾವಿಸೋಣ. ಹುಟ್ಟುವ ಮಗು ಗಂಡಾದರೆ ಮೃತನ ಮಟ್ಟಿಗೆ ಆ ಮಗುವಿಗೆ ಪಿತ ಒಂದೇ ಆಗಿರುವ ಸಹೋದರನೆಂಬ ಸ್ಥಾನವಿರುವುದು. ಪ್ರಸ್ತುತ ಮಗು ಶೇಷ ಹಕ್ಕುದಾರ (ಅಸ್ವಬಃ) ಆಗಿರುವುದರಿಂದ ಪಾಲು ಇರಲಾರದು. ಯಾಕೆಂದರೆ ನಿರ್ಣಿತ ಪಾಲುದಾರರ ಹಕ್ಕು ನೀಡಿದ ಬಳಿಕ ಸೊತ್ತು ಬಾಕಿಯಿರಲಾರದು. ಆದರೆ ಮಗು ಹೆಣ್ಣಾದರೆ ಆಕೆಗೆ $^1/_6$ ಹಕ್ಕು ಇರುವುದು.

3. ಗರ್ಭಸ್ಥ ಶಿಶುವಿನ ಜನನದ ಬಳಿಕ ತೆಗೆದಿರಿಸಿದ ಸೊತ್ತಿಗೆ ಆತ/ಆಕೆ ಸಂಪೂರ್ಣ ಅಥವಾ ಆಂಶಿಕವಾಗಿ ಅರ್ಹರಲ್ಲವೆಂದು ಮನವರಿಕೆಯಾದರೆ ಬಾಕಿ ಸೊತ್ತನ್ನು ಇತರ ಹಕ್ಕುದಾರರಿಗೇ ಹಂಚಬೇಕು.

## ಕಾಣೆಯಾದವನ ಹಕ್ಕು

ಕಾಣೆಯಾದ ವ್ಯಕ್ತಿಯನ್ನು ವಾರೀಸು ಹಕ್ಕು ಕಾನೂನು ತಜ್ಞರ ಪಾರಿಭಾಷಿಕದಲ್ಲಿ 'ಮಫ್ಕೂದ್' ಎಂದು ಹೇಳುತ್ತಾರೆ. ಬದುಕಿದ್ದಾರೆಯೇ ಎಂದು ಖಚಿತವಿಲ್ಲದ ಮತ್ತು ವಿವರಗಳು ಅಜ್ಞಾತವಾಗಿರುವ ಕಾಣೆಯಾದ ವ್ಯಕ್ತಿಯೇ ಅದರ ಉದ್ದೇಶವಾಗಿದೆ.

'ಮಫ್ಕೂದ್'ನ ಸೊತ್ತು, ಸಂಬಂಧಿಕರ ದಾಯಧನದಲ್ಲಿ ಅವರ ಹಕ್ಕು - ಹೀಗೆ ಅವರಿಗೆ ಸಂಬಂಧಿಸಿದ ಕಾನೂನುಗಳಿಗೆ ಎರಡು ಅಂಶಗಳಿವೆ. ಒಂದನೆಯ ಅಂಶದ ಮಟ್ಟಿಗೆ ತನ್ನ ಮರಣವು ಸ್ಪಷ್ಟ ದಾಖಲೆಯ ಆಧಾರದಲ್ಲಿ ದೃಢೀಕೃತವಾದರೆ ಅಥವಾ ಕಾಝಿ ಆ ಪ್ರಕಾರ ತೀರ್ಪು ನೀಡುವ ತನಕ ಆತನ ಸೊತ್ತು ಸಂರಕ್ಷಿಸಲ್ಪಡಬೇಕು ಮತ್ತು ವಾರೀಸು ಹಕ್ಕುದಾರರು ಹಂಚಿಕೊಳ್ಳಬಾರದೆಂಬ ನಿಯಮವಿದೆ. ಆದರೆ ಆತನ ಹಕ್ಕಿಗೆ ಸೇರಿದ ದಾಯಧನವನ್ನು ಕೆಳಗೆ ಹೇಳಿದ ಪ್ರಕಾರ ವ್ಯವಹರಿಸಬೇಕು.

ಮೃತ ವ್ಯಕ್ತಿಯ ಹಕ್ಕುದಾರ ಕೇವಲ 'ಮಫ್ಕೂದ್' ಮಾತ್ರವಿದ್ದರೆ ಅಥವಾ ಇತರ ಹಕ್ಕುದಾರರು ಆತನ ಮೂಲಕ ಹಕ್ಕು ತಡೆಯಲ್ಪಟ್ಟವರಾದರೆ, ಆತ ಮರಳುವ ಅಥವಾ ಬದುಕಿಲ್ಲವೆಂದು ಸಾಬೀತಾಗುವ ತನಕ ಸೊತ್ತಿನ ಹಂಚುವಿಕೆಯನ್ನು ನಿಲ್ಲಿಸಬೇಕು. ಇತರ ಹಕ್ಕುದಾರರು 'ಮಫ್ಕೂದ್'ನಿಂದ ತಡೆಯಲ್ಪಡದವರಾಗಿದ್ದರೆ ಬದುಕಿರುವನೆಂಬ ಕಲ್ಪನೆಯಲ್ಲಿ ಸೊತ್ತು ಪಾಲು ಮಾಡಿ ಆತನ ಪಾಲನ್ನು ತೆಗೆದಿರಿಸಿ ಉಳಿದುದನ್ನು ಇತರ ಹಕ್ಕುದಾರರಿಗೆ ನೀಡಬೇಕು. 'ಮಫ್ಕೂದ್' ಬದುಕಿರುವರೆಂದು ಅನಂತರ ವ್ಯಕ್ತವಾದರೆ ಅವರು ಮರಳಿಬರುವ ತನಕ ಅವರ ಪಾಲನ್ನು ಸಂರಕ್ಷಿಸಿ ಮರಳಿ ಬಂದಾಗ ಅವರಿಗೆ ಒಪ್ಪಿಸಬೇಕು. ಇನ್ನು ದಾಯಕನ ಮರಣದ ಬಳಿಕ ಅವರು ಬದುಕಿಲ್ಲವೆಂದು ಸಾಬೀತಾದರೆ ಅಥವಾ ಕಾಝಿ ಆ ಪ್ರಕಾರ ತೀರ್ಪು ನೀಡಿದರೆ ಸೊತ್ತನ್ನು ಅವರ ವಾರೀಸುದಾರರಿಗೆ ನೀಡಲಾಗುವುದು. ದಾಯಕನ ಮರಣಕ್ಕಿಂತ ಮುಂಚೆಯೇ ಅವರು ಬದುಕಿಲ್ಲವೆಂದು ಸಾಬೀತಾದರೆ ಅವರಿಗಾಗಿ ತೆಗೆದಿರಿಸಿದ ಪಾಲನ್ನು ದಾಯಕನ ಇತರ ಹಕ್ಕುದಾರರಿಗೇ ನೀಡಬೇಕು.

## ಕೈದಿ

ಮುಸ್ಲಿಮೇತರರ ಅಧೀನದಲ್ಲಿರುವ ಮುಸ್ಲಿಮ್ ಕೈದಿ ಬದುಕಿದ್ದಾನೆ ಮತ್ತು ಸ್ವತಂತ್ರರಾಗಿರುವನೆಂದು ಸಾಬೀತಾದರೆ ಆತನಿಗೆ ದಾಯಧನ ದೊರೆಯುವುದೆಂಬ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಅವರು ಗುಲಾಮತನವನ್ನು ಅನುಭವಿಸಿದರೆ ಬಿಡುಗಡೆಯಾಗುವ ತನಕ ಅವರ ಧನವನ್ನು ಸಂರಕ್ಷಿಸಬೇಕು. ಮರಳುವುದಕ್ಕಿಂತ ಮುಂಚೆ ಅವರು ಮರಣ ಹೊಂದಿದರೆ ಅವರ ಪಾಲನ್ನು ಅವರ ಹಕ್ಕುದಾರರ ಮಧ್ಯೆ ಹಂಚಬೇಕು.

## ಧರ್ಮ ಭ್ರಷ್ಟ

ಧರ್ಮ ಭ್ರಷ್ಟ (ಮುರ್ತದ್ದ್)ನೆಂದರೆ ಇಸ್ಲಾಮಿನಿಂದ ಹೊರ ಹೋದವನು. ಅವರ ದಾಯಧನವು ಅವರ ಮುಸ್ಲಿಮರಾದ ದಾಯ ಸಂಬಂಧಿಕರಿಗೆ ನೀಡಬೇಕೆಂಬ ಒಂದು ಅಭಿಪ್ರಾಯವಿದೆ. ಅದು ಮುಸ್ಲಿಮರ ಸಾರ್ವಜನಿಕ ಬೊಕ್ಕಸದಲ್ಲಿ ಸೇರಿಸಬೇಕೆಂಬ ಇನ್ನೊಂದು ಅಭಿಪ್ರಾಯವೂ ಇದೆ.

## ನಪುಂಸಕ

ನಪುಂಸಕನನ್ನು ಪುರುಷನೆಂದು ತೀರ್ಪು ನೀಡಿದರೆ ಪುರುಷನ ಪಾಲು ಮತ್ತು ಸ್ತ್ರೀಯೆಂದು ತೀರ್ಪು ನೀಡಿದರೆ ಸ್ತ್ರೀಯ ಪಾಲು ಇರುತ್ತದೆ.

## ಜಾರ ಸಂತಾನ

ದಾಯಕನೊಂದಿಗಿರುವ ಹಕ್ಕುದಾರನ ಸಂಬಂಧವು ದೃಢೀಕರಣವಾಗಬೇಕೆಂಬುದು ದಾಯಧನದಲ್ಲಿ ಹಕ್ಕು ದೊರೆಯುವ ಉಪಾಧಿಯಾಗಿದೆ. ಜಾರ ಸಂತಾನದ ಪಿತೃ ಸಂಬಂಧವು ಕಾನೂನು ಬದ್ಧವಲ್ಲ. ಆದ್ದರಿಂದ ಆತನಿಗೆ 'ಪಿತ'ನ ದಾಯಧನದಲ್ಲಿ ಹಕ್ಕಿರಲಾರದು. ಆತನ ದಾಯಧನದಲ್ಲಿ ಪಿತನಿಗೂ ಹಕ್ಕಿರುವುದಿಲ್ಲ. ಆದರೆ ತಾಯಿ ಮತ್ತು ಆತ ದಾಯಧನದಲ್ಲಿ ಪರಸ್ಪರ ಹಕ್ಕುದಾರರಾಗಿರುತ್ತಾರೆ.

## ವಲದುಲ್ಲಿಆನ್

ವೈವಾಹಿಕ ಸಂಬಂಧದಲ್ಲಿ ಹುಟ್ಟಿ ಪತಿಯು ತನ್ನ ಸಂತಾನವೆಂದು ಅಂಗೀಕರಿಸದ ಮಗುವನ್ನು 'ವಲದುಲ್ಲಿಆನ್' ಎನ್ನಲಾಗುತ್ತದೆ. ಪತ್ನಿಯು ವ್ಯಭಿಚಾರಿಣಿಯೆಂದು ಪತಿಯೂ ಪತಿಯು ಸುಳ್ಳು ಹೇಳುತ್ತಿರುವನೆಂದು ಪತ್ನಿಯೂ ಆಣೆ ಹಾಕಿ ಪರಸ್ಪರ ಶಪಿಸಿ ಬೇರ್ಪಟ್ಟ ಬಳಿಕ, ಆ ಮಗುವಿನ ಪಿತೃತ್ವವು ಆ ಪತಿಗೆ ಇರಲಾರದು. ಆದ್ದರಿಂದಲೇ ಆತನ ದಾಯಧನದಲ್ಲಿ ಆ ಮಗುವಿಗೆ ಹಕ್ಕೂ ಇರುವುದಿಲ್ಲ. ಮಗುವಿನ ಸೊತ್ತಿನಲ್ಲಿ ಆತನಿಗೂ ಹಕ್ಕಿರುವುದಿಲ್ಲ. ದಾಯಧನ ಹಕ್ಕಿನ ಸಂಬಂಧವು ಆತನಿಗೂ ತಾಯಿಗೂ ಸೀಮಿತವಾಗಿರುವುದು.

## ತಖಾರುಜ್

ದಾಯಧನದಲ್ಲಿ ತನಗೆ ದೊರೆಯಬೇಕಾದ ಹಕ್ಕನ್ನು ಇತರರಿಗೆ ಬದಲಿಗಾಗಿ ಹಸ್ತಾಂತರಿಸುವುದಕ್ಕೆ 'ತಖಾರುಜ್' ಎಂದು ಹೇಳುತ್ತಾರೆ. ಇದು ಧರ್ಮಬದ್ಧವಾಗಿದೆ.

## ಮುನಾಸಖಃ

ದಾಯಧನವನ್ನು ಪಾಲು ಮಾಡುವುದಕ್ಕಿಂತ ಮುಂಚೆ ಹಕ್ಕುದಾರರಲ್ಲಿ ಯಾರಾದರೂ ಮೃತರಾದರೆ ಅವರಿಗೆ ದೊರೆಯಬೇಕಾದ ಪಾಲು ಅವರ ವಾರೀಸಿನ ಹಕ್ಕುದಾರರಿಗೆ ಸೇರಬೇಕು. ಒಟ್ಟು ದಾಯಧನವನ್ನು ಪಾಲು ಮಾಡುವಾಗಲೇ ಎರಡನೆಯ ದಾಯಕನ ಪಾಲನ್ನು ಅವರ ಹಕ್ಕುದಾರರಿಗೆ ಪಾಲು ಮಾಡಿಕೊಡುವ ಕ್ರಮವನ್ನು 'ಮುನಾಸಖಃ' ಎನ್ನಲಾಗುತ್ತದೆ.

